ತಿಕ
೨
ಸಂ.
24-2

# ಅನ್ವೇಷಣೆ

ಸಾಹಿತ್ಯ ಸಾಂಸ್ಕೃತಿಕ ಪತ್ರಿಕೆ



ಕಲೆ : ಎಸ್. ಜಿ. ವಾಸುದೇವ್

ರೂ 3/-

ಪ್ರಗತಿಪರ
ವಿಚಾರಗಳಿಗೆ

# ಅನ್ವೇಷಣೆ

ಸಾಂಸ್ಕೃತಿಕ
ಚಟುವಟಿಕೆಗಳಿಗೆ

ಸಂಪುಟ : 3 ಜುಲೈ–ಆಗಸ್ಟ್ 88 ಸಂಚಿಕೆ : 24–25

ಸಂಪಾದಕ : ಆರ್. ಜಿ. ಹಳ್ಳಿ ನಾಗರಾಜ್

ಸಹಾಯಕ ಸಂಪಾದಕರು : ಕೆ.ಎಂ. ಮುನಿಕೃಷ್ಣಪ್ಪ, ಹೆಚ್.ಸಿ. ಸೋಮಶೇಖರ್
ಪುಷ್ಪ ನಾಗರಾಜ್, ಕೆ.ವಿ. ಸುಬ್ರಹ್ಮಣ್ಯ

ಈ ಸಂಚಿಕೆಯಲ್ಲಿ

ಕಲೆ–ಕಲಾವಿದ : ಎಸ್. ಜಿ. ವಾಸುದೇವ್ : ಕೆ. ವಿ. ಸುಬ್ರಹ್ಮಣ್ಯ — ೨
ಕನ್ನಡ ಲಿಪಿ ಸಂಜ್ಞೆಗಳ ಕುರಿತ : ಯು. ಕೃಷ್ಣಶರ್ಮ — ೫
ಡಿ.ಆರ್. ನಾಗರಾಜರ ಶಕ್ತಿ–ಶಾರದೆ : ಡಾ|| ಪೋಲಂಕಿ ರಾಮಮೂರ್ತಿ — ೭
ತೇಜಸ್ವಿ ಸಾಹಿತ್ಯ ಮತ್ತು ಸಾಮಾಜಿಕ ಪ್ರಜ್ಞೆ :
ವೇಣುಗೋಪಾಲ ಸೊರಬ — ೧೬
ಪು. ತಿ. ನ. ಅವರ 'ಶ್ರೀಹರಿ ಚರಿತೆ' : ಮಲ್ಲೇಪುರಂ ಜಿ. ವೆಂಕಟೇಶ್ — ೨೪
ಬಿ. ಆರ್. ಲಕ್ಷ್ಮಣರಾವ್ 'ಶಾಂಗ್ರಿ-ಲಾ' : ಸ. ರಘುನಾಥ — ೨೭
ಕಾವ್ಯಾನ್ವೇಷಣೆ (ಕವನಗಳು) : ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯ, — ೨೭
ಎಲ್. ಎನ್. ಮುಕುಂದರಾಜ್, ನಜೀರ್ ಚಂದಾವರ, ರಿಂದ
ಸಂಧ್ಯಾ ಲಕ್ಷ್ಮೀಕಾಂತ್, ವಿದ್ಯಾ ಭರತನಹಳ್ಳಿ, ಎಸ್.ಜಿ. ಸ್ವಾಮಿ ೩೬
ದಲಿತ ಬಂಡಾಯದ ಸಾಮಾಜಿಕ ನಿಲುವು : ಡಾ|| ಮನಜ — ೩೭
ಪುಸ್ತಕ ವಿಮರ್ಶೆ : ಕೆ. ಎಂ. ಮುನಿಕೃಷ್ಣಪ್ಪ — ೪೭
ಲಂಕೇಶ್ : ಕೆಲವು ತುಣುಕುಗಳು : ಆರ್. ಜಿ. ಹಳ್ಳಿ — ೫೨

ವಾರ್ಷಿಕ ಚಂದಾ : ವ್ಯಕ್ತಿಗಳಿಗೆ ರೂ. 30 ಆಜೀವ ರೂ. 300
ಗ್ರಂಥಾಲಯ/ಸಂಸ್ಥೆಗಳಿಗೆ ರೂ. 40 (1 ಅಥವಾ 6 ಕಂತು)

ಚಂದಾ ಹಣವನ್ನು ಎಂ.ಓ. ಇಲ್ಲವೆ ಡಿ.ಡಿ. ಮೂಲಕ ಕಳುಹಿಸಿ. ಎಂ.ಓ. ಕೂಪನ್ ನಲ್ಲಿ ವಿಳಾಸ ಸ್ಪಷ್ಟವಾಗಿ ಬರೆಯಿರಿ. ವಿಳಾಸ ಬದಲಾದರೆ ಕಾರ್ಡ್ ಬರೆಯಿರಿ.

ವಿಳಾಸ : ಸಂಪಾದಕ, 478, 11ನೇ ಎಂ. ಸಿ. ಮುಖ್ಯರಸ್ತೆ,
ವಿಜಯನಗರ, ಬೆಂಗಳೂರು–560 040.

# ಎಸ್.ಜಿ. ವಾಸುದೇವ್‌ರ ಕಲೆ

–ಕೆ. ವಿ. ಸುಬ್ರಹ್ಮಣ್ಯ

1960ರ ದಶಕದಲ್ಲಿ 'ಸಂಯುಕ್ತ ಕರ್ನಾಟಕ'ದ ಜನಪ್ರಿಯ ಅಂಕಣವಾದ 'ವಾರದ ವ್ಯಕ್ತಿ'ಯ ವಿಡಂಬನ ಬರಹಕ್ಕೆ ಕ್ಯಾರಿಕೇಚರ್ ರಚಿಸುತ್ತ ಕಲಾವಲಯಗಳಲ್ಲಿ ಸಾಕಷ್ಟು ಗಮನಾರ್ಹರಾಗಿದ್ದ ಉದಯೋನ್ಮುಖ ಎಸ್.ಜಿ. ವಾಸುದೇವ್‌ರವರು, ತಮ್ಮ ರೇಖಾಭಿ ವ್ಯಕ್ತಿಗೆ ಬೆಂಗಳೂರಿನ ನ್ಯಾಷನಲ್ ಕಾಲೇಜಿನ ವಿದ್ಯಾರ್ಥಿ ಮಿತ್ರರಿಂದ ಅಸಾಮಾನ್ಯ ನೆನ್ನಿಸಿಕೊಂಡಿದ್ದರು. ಇವರ ರೇಖೆಗಳ ಸದೃಢತೆಯನ್ನು ಕಂಡು ಹಲವಾರು ಹಿರಿಯರು ಪ್ರೋತ್ಸಾಹದ ಮಾತನ್ನಾಡಿದರು. ಕಲಾವಿಮರ್ಶಕ– ದಿ|| ಜಿ. ವೆಂಕಟಾಚಲಂ ಮದ್ರಾಸಿನ ಕಲಾಶಾಲೆಯಲ್ಲಿ ಅಭ್ಯಾಸ ಮಾಡುವಂತೆ ವಾಸುದೇವ್‌ರವರಿಗೆ ಸಲಹೆ ನೀಡಿದರು. 1968ರಲ್ಲಿ ಚಿತ್ರಕಲೆಯ ಡಿಪ್ಲೋಮಾ ಪಡೆದು ಮದ್ರಾಸಿನಿಂದ ವಾಸುದೇವ್ (ಜನನ 1941–ಬೆಂಗಳೂರು) ಹಿಂತಿರುಗಿದರು.

ಈ ನಡುವೆ (ಸುಮಾರು 1960) ವೈ. ಎನ್. ಕೃಷ್ಣಮೂರ್ತಿ, ಪಿ. ಲಂಕೇಶ್, ಬಿ.ವಿ. ಕಾರಂತ್, ಗಿರೀಶ್‌ಕಾರ್ನಾಡ್ ಮೊದಲಾದವರ ಸಂಪರ್ಕ. ಸಾಹಿತ್ಯ–ನಾಟಕ-ಚಲನ ಚಿತ್ರ ರಂಗಗಳ ಹತ್ತಿರದ ಪರಿಚಯ. ಅಂದಿನ ಹಲವಾರು ನಾಟಕಗಳಿಗೆ ದೃಷ್ಯಗಳ ಕಲ್ಪನೆ–ವಿನ್ಯಾಸ, ಮುಖವಾಡಗಳ ಸೃಷ್ಟಿ, ಚಿತ್ರಿಪತ್ರ ರಚನೆ ಇತ್ಯಾದಿಗಳನ್ನು ಮಾಡಿದರು. ಡಾ|| ಯು. ಆರ್. ಅನಂತಮೂರ್ತಿಯವರೊಂದಿಗಿನ ಸಾನ್ನಿಧ್ಯ–ಚರ್ಚೆಗಳಿಂದ ಸಿನಿಮಾ ಮಾಡುವ ಕಲ್ಪನೆ ಇಲ್ಲದೆ ಸೃಷ್ಟಿಯಾಗಿದ್ದ, ಬಹುಚರ್ಚಿತ 'ಸಂಸ್ಕಾರ' ಸಿನಿಮಾ ಆದಾಗ ಇವರ ಪಾಲೂ ಅದರ ಕಲಾತ್ಮಕ, ಸೃಜನಶೀಲ ನಿರೂಪಣೆಯಲ್ಲಿತ್ತು. 'ಭಾರತೀಪುರ' ಕಾದಂಬರಿಯ ವಿವರಗಳಲ್ಲಿ ಅನಂತಮೂರ್ತಿಯವರು ಸಿನಿಮಾದ ಸ್ಕ್ರಿಪ್ಟನ್ನೇ ಹೋಲುವಂತಹ ಸೃಷ್ಟಿಯನ್ನು ಮಾಡಿರುವ ಬಗ್ಗೆ ವಾಸುದೇವ್ ಆಶ್ಚರ್ಯ, ನಿರಾಶೆಗಳೆರಡನ್ನೂ ವ್ಯಕ್ತಪಡಿಸುತ್ತಾರೆ. 1968ರಲ್ಲಿ ಧಾರವಾಡದ ಮನೋಹರ ಗ್ರಂಥಮಾಲೆಯ 'ಬೇಂದ್ರೆ ಕಾವ್ಯ' ಕುರಿತ ಕಾರ್ಯಕ್ರಮವೊಂದರಲ್ಲಿ ವಾಸುದೇವ್ ಭಾಗವಹಿಸಿದ್ದರು. ಕೀರ್ತಿನಾಥ ಕುರ್ತುಕೋಟಿಯವರಿಂದ ಕಾವ್ಯ ಸೃಷ್ಟಿ ಪ್ರಕ್ರಿಯೆಗಳ ಬಗ್ಗೆ ತಿಳಿದರು. ಸಾಹಿತ್ಯ ವಿಮರ್ಶೆಯ ನೆಲೆ–ಬೆಲೆಗಳ ಪರಿಚಯವಿರುವ ವಾಸುದೇವ್ ಇತ್ತೀಚಿನ ಬಿ.ಆರ್. ಲಕ್ಷ್ಮಣರಾವ್‌ರ ಕಾವ್ಯದಿಂದ ಡಾ|| ಡಿ.ಆರ್. ನಾಗರಾಜ್‌ರ ಸಾಹಿತ್ಯ ವಿಮರ್ಶೆಯ ಮುಖ್ಯ ಸೆಳಕುಗಳನ್ನು ಬಲ್ಲ ಕರ್ನಾಟಕದ ಅಪರೂಪ (ಪತ್ರಿಕೆಗಳನ್ನು ಓದಲೂ ಬಿಡುವಿಲ್ಲ ಎಂಬ ಕಲಾವಿದರಿರುವ ಇಂದಿನ ದಿನಗಳಲ್ಲಿ) ಕಲಾವಿದರು.

ಹೊಸ ಅನ್ವೇಷಣೆಗಳಿಗೆ ಮಾರ್ಗದರ್ಶಕ ಸ್ಫೂರ್ತಿಯಂತಿದ್ದ ಕಲಾವಿದ ಕೆ.ಸಿ.ಎಸ್. ಫಣಿಕ್ಕರ್‌ರವರ ಮಾರ್ಗದರ್ಶನದಲ್ಲಿ ಕಲಾಭ್ಯಾಸ ಮಾಡಿದ ವಾಸುದೇವ್– ತಮ್ಮ ಸೃಜನಶೀಲತೆಗೆ ಹೊಸತನವನ್ನು ಲೇಪಿಸಿದರು; ರೇಖೆಗಳನ್ನು ಕಲಾಕೃತಿಯೊಂದರ

ಮೂಲಸೆಲೆಯಾಗಿ ದುಡಿಸಿಕೊಳ್ಳುವುದರ ಬಗ್ಗೆ ಪ್ರಯೋಗಶೀಲರಾದರು. ತಾವು ಬೆಳೆದಂತೆಲ್ಲಾ ಅನುಭವಗಳಿಗಾಗಿ ತಮ್ಮಿಂದ ಹೊರಕ್ಕೆ ಕೈಚಾಚಿದಾಗ, ತಮ್ಮೊಳಗಿನ ಬದುಕೆಂಬ 'ವೃಕ್ಷ'ದ ಬೆಳವಣಿಗೆಯ ಬಗ್ಗೆ ಚಿಂತಿಸುವ ವಾಸುದೇವ್ ಆ ಜೀವವೃಕ್ಷದ ರಚನೆ ಸುಸಂಬದ್ಧವಾಗಿ ಹೊಂದಿಕೊಂಡ–ಪುರಾಣದ ಸಾಂಕೇತಿಕ ಪ್ರತೀಕದಂತೆ–ಅಭಿವ್ಯಕ್ತಗೊಳ್ಳುತ್ತದೆ. ಪ್ರಾಣಿಗಳ ಪ್ರಪಂಚದ ಒಂದು ಭಾಗವೆಂಬಂತೆ ಕಾಣುವ ಅವರ ಕೃತಿಗಳಲ್ಲಿ ಪಕ್ಷಿಗಳು, ಸರಿಸೃಪಗಳು, ಆನೆ, ಇತ್ಯಾದಿಗಳಲ್ಲದೆ ಗಂಡು ಹೆಣ್ಣುಗಳು, ನೈಜ ಅಥವಾ ಸಂಭಾವ್ಯ ಜೀವಿಗಳು, ಕೃತಕ ಮತ್ತು ಪ್ರಕೃತಿ ಸಹಜ ವಸ್ತುಗಳು, ಇತ್ಯಾದಿಗಳು, ಮುಗಿಲುಗಳೊಂದಿಗೆ ಏರಿಳಿತಗಳುಳ್ಳ ಬೆಟ್ಟ, ಶಿಖರಗಳು ಭೂದೃಶ್ಯಗಳಲ್ಲಿ ಜೀವನೋತ್ಸಾಹದಿಂದ ಬದುಕುತ್ತಿರುವಂಥ ಚಿತ್ರಣವಿದೆ. ಕೆಲವು ವಂಶವೃಕ್ಷವೆಂಬಂತೆ ಕಂಡರೆ ಮತ್ತೆ ಕೆಲವು ವೃಕ್ಷವೊಂದಿಗೆ ಬಾಹ್ಯಾಕಾಶ, ಗ್ರಹಗಳನ್ನು ನೆನಪಿಸುತ್ತವೆ. ಭಾರತೀಯ ಜಾನಪದ, ಪುರಾಣ ಇತ್ಯಾದಿಗಳಿಂದ ಸ್ಫೂರ್ತಿಗೊಂಡಿರುವ ವಾಸುದೇವ್‌ರ 'ವೃಕ್ಷ' ಪುರಾಣಗಳ 'ಕಲ್ಪವೃಕ್ಷ'ದ ಸಂಕೇತದಂತಿವೆ. ಬದುಕಿನ ವೃಕ್ಷ ಎಂಬ ರಂಗಭೂಮಿಯಲ್ಲಿ ಕಲಾವಿದನ ಎಲ್ಲ ಚಿಂತನೆಗಳು ಕಾಣಿಸಿಕೊಳ್ಳುತ್ತವೆ. ಬದುಕಿನ ಮರವನ್ನು ಚಿತ್ರಿಸಿಕೊಂಡ 'ವೃಕ್ಷ'ಮಾಲೆ, ಬದುಕಿನ ಭ್ರಮೆಗಳ "ಫ್ಯಾಂಟಸಿ" ಮಾಲೆಯ ಸಾಕಷ್ಟು ಸಂಖ್ಯೆಯ ಕೃತಿಗಳ ನಂತರ "ಬದುಕು ಮತ್ತು ಸಾವಿನ ವೃಕ್ಷ" ಮಾಲೆಯ ಕೃತಿಗಳೂ ಸೃಷ್ಟಿಯಾಗಿವೆ. ಇತ್ತೀಚೆಗೆ 'ವೃಕ್ಷ ಮತ್ತು ಮನುಷ್ಯ' ಹೀಗೆ ಹಲವಾರು ಕೃತಿಗಳು ಇವರ ಕುಂಚದಿಂದ ಹೊರಬಂದಿವೆ.

ತಮ್ಮ ತೈಲ ವರ್ಣಮಾಧ್ಯಮದ ಈ ಕೃತಿಗಳಲ್ಲಿ ವಾಸುದೇವ್ ವೈಯಕ್ತಿಕ ಶೈಲಿಯನ್ನು ಛಾಪಿಸಿದ್ದಾರಲ್ಲದೆ ತಾವೇ ಅನ್ವೇಷಿಸಿದ ತಂತ್ರಗಳನ್ನೂ ಮೈವಳಿಕೆ (ಟೆಕ್ಸ್‌ಚರ್ಸ್) ಗಳನ್ನೂ ಬಳಸಿದ್ದಾರೆ. ರಟ್ಟರಿವೆ (ಕ್ಯಾನ್‌ವಾಸ್) ಯ ತೆಳುವರ್ಣ ಲೇಪನದ ಮೇಲೆ ವರ್ಣಕೆರೆದು, ಅಗತ್ಯ ರೇಖೆಗಳಿಂದ, ವಸ್ತುವನ್ನು ನಿರೂಪಿಸಿ ಆಕಾರಗಳ ನಡುವೆ ಬಣ್ಣಗೂಡಿಸುತ್ತಾರೆ. ರೇಖೆಗಳು ಪ್ರತ್ಯೇಕ ಅಸ್ತಿತ್ವವನ್ನು ಹೊಂದಿದಂತೆ ಕಂಡೂ ಬಣ್ಣಗಳೊಂದಿಗೆ ಬೇರೆಯಾಗಿದ್ದೂ ಕೃತಿಯ ಸಮಗ್ರತೆಯ ದೃಷ್ಟಿಯಿಂದ ವರ್ಣಸಂಯೋಜನೆಯ ಸಾಮರಸ್ಯದಲ್ಲಿ ಭಾಗಿಯಾಗುತ್ತವೆ. ಕೆಂಪು, ಹಸಿರು, ನೀಲಿ, ತೆಳುನೀಲಿ ಹಳದಿ, ಮೊದಲಾದ ವರ್ಣಗಳು ಆಕರ್ಷಕವಾಗಿ ಅಲಂಕರಣಗೊಂಡು ವಸ್ತುವಿಗೆ ಪೂರಕವಾಗುತ್ತವೆ. ಇದೇ ವಸ್ತುವನ್ನು ಲೋಹದ ಉಬ್ಬ ಶಿಲ್ಪಗಳಲ್ಲೂ ಯಶಸ್ವಿಯಾಗಿ ಅಭಿವ್ಯಕ್ತಿಸಿರುವ ವಾಸುದೇವ್ ಇದೀಗ ತಮ್ಮ ಎಂದಿನ 'ವೃಕ್ಷ' ಮಾಲೆಯ ಚಿಂತನೆಯ ಹಾದಿಯಲ್ಲಿ ಲೋಹದ ಶಿಲ್ಪವೊಂದನ್ನು ದೆಹಲಿಯ ಸಿಟಿ ಬ್ಯಾಂಕಿಗೆ ಸೃಷ್ಟಿಸಿದ್ದಾರೆ. ಚೌಕಟ್ಟಿನ ಮೇಲೆ ನಿಂತ ಅಲಂಕರಣಗೊಂಡ ಅಣಬೆಯಂತೆ, ನಾಲ್ಕೂನಿಟ್ಟಿನತ್ತ ಬೆಳೆಯಲು ಧಾವಿಸುತ್ತಿರುವ ಸೃಷ್ಟಿಯ ವೃಕ್ಷದಂತೆ ಕಾಣುವ ಶಿಲ್ಪ

ತನ್ನ ಬೊಡ್ಡೆಯ ಮೇಲೆ, ಸುತ್ತ ಸೂರ್ಯ, ಹರಿವ ನೀರು, ಮೀನು ಇತ್ಯಾದಿಗಳನ್ನು ಹೊಂದಿದೆ. ಇಲ್ಲಿ ಕಾವ್ಯಮಯ ಲಯವನ್ನು ಗುರುತಿಸಬಹುದು. ಆಕಾರ ಸಂಯೋಜನೆಯ ಹೊಂದಾಣಿಕೆಗೆ ಅಲ್ಲಲ್ಲಿ ಮೊಳೆಯಾಕಾರದ ಲೋಹದ ತುಣುಕುಗಳನ್ನು ಬೆಸುಗೆ ಹಾಕಲಾಗಿದೆ. ಮದ್ರಾಸಿನ ಚೋಳಮಂಡಲದ ಛಾಪು ಕಾಣುತ್ತದೆಯಾದರೂ ಬ್ಯಾಂಕೊಂದರ ನಿರಂತರ ಬೆಳವಣಿಗೆಗೆ ಸಂಕೇತವಾಗಿರುವಂತೆ ಈ ಶಿಲ್ಪವನ್ನು ಸೃಷ್ಟಿಸಿರುವುದು ಗಮನಾರ್ಹ.

ಹಿಂದಿನ ವೃಕ್ಷಮಾಲೆಯ ತೈಲವರ್ಣಕೃತಿಗಳ ವೃಕ್ಷದ ಆಕಾರದ ಪ್ರಾಮುಖ್ಯತೆಗಿಂತ 'ಬದುಕು ಮತ್ತು ಸಾವಿನ ವೃಕ್ಷ' ಕೃತಿಗಳಲ್ಲಿ ಮಾನವಾಕಾರಗಳು ಪ್ರಾಮುಖ್ಯತೆಯುನ್ನು ಹೊಂದಿವೆ. ರಾಷ್ಟ್ರೀಯ-ಅಂತರರಾಷ್ಟ್ರೀಯ ಕಲಾಪ್ರದರ್ಶನಗಳಲ್ಲಿ ಭಾಗವಹಿಸಿರುವ ಹಲವು ಪ್ರಶಸ್ತಿಗಳನ್ನು ಗಳಿಸಿರುವ ಕ್ರಿಯಾಶೀಲ ವಾಸುದೇವ್‌ರವರ ಕೃತಿಗಳ ವಿಮರ್ಶೆ ಇನ್ನೂ ಗಮನಾರ್ಹ ರೀತಿಯಲ್ಲಿ ಆಗಬೇಕಿದೆ.

---

## ಸಂಪಾದಕನ ದೃಷ್ಟಿ : ವಾಸುದೇವ್

---

ಕರ್ನಾಟಕ-ಕಲಾ ಪ್ರಪಂಚಕ್ಕೆ ಹಲವು ಶ್ರೇಷ್ಠರನ್ನು ನೀಡಿದೆ. ಕೆ.ಕೆ. ಹೆಬ್ಬಾರ್ ಅಂತರರಾಷ್ಟ್ರೀಯ ಖ್ಯಾತಿ ಪಡೆದರೆ, ವಾಸುದೇವ್ ಅಂಥ ಖ್ಯಾತಿಯ ಹತ್ತಿರವೇ ಸುಳಿದಾಡುತ್ತಿರುವ ಸೃಜನಶೀಲ ಕಲಾವಿದರು.

ಎಸ್.ಜಿ. ವಾಸುದೇವ್ ಎಂದರೆ ಕಲಾಕೃತಿಗಳಲ್ಲಿ ವೃಕ್ಷಗಳ ನೆನಪು ತರುವ ಅದ್ಭುತ ಕಲಾ ಸೃಷ್ಟಿಯ "ಜೀವಂತ ಕಲಾವಿದ". ಈ ಸಂದರ್ಭದಲ್ಲೇ ಮದ್ರಾಸ್‌ನ "ಚೋಳ ಮಂಡಲ"ದ ವಾಸುದೇವ್ ಎಂದು ನೆನಪಾಗುತ್ತಾರೆ. ಈಚೆಗೆ ಬೆಂಗಳೂರಿನಲ್ಲೇ ತಮ್ಮ ಚಟುವಟಿಕೆಗಳನ್ನು ಮೌನವಾಗೇ ಮುಂದುವರಿಸಿಕೊಂಡು ಹೋಗುತ್ತಿರುವ ವಾಸುದೇವ್ ತಮ್ಮ ಬಾಳಸಂಗಾತಿಯನ್ನು ಕೆಲವೇ ತಿಂಗಳ ಹಿಂದೆಯಷ್ಟೇ ಕಳೆದುಕೊಂಡು; ಈ ಏಕಾಂಗಿತನವನ್ನು ಕಲಾಕೃತಿಗಳ ನಿರ್ಮಾಣದಲ್ಲಿ ಮರೆಯಲು ಪ್ರಯತ್ನಿಸುತ್ತಿದ್ದಾರೆ. ಬೆಂಗಳೂರಿನ ಸುಂದರ ಪ್ರಕೃತಿಯ ವ್ಯಾಲಿಶಾಲೆ (ದಿ|| ಜಿಡ್ಡು ಕೃಷ್ಣಮೂರ್ತಿ ಸ್ಥಾಪನೆ) ಯಲ್ಲಿ ಏಳು ವರ್ಷದ ಮಗನನ್ನು ಅಭ್ಯಾಸಕ್ಕೆ ಬಿಟ್ಟು, ಬೆಂಗಳೂರು-ಮದ್ರಾಸ್ ಎರಡೂ ಕಡೆ ಕಾಲಿಟ್ಟಿರುವ ವಾಸುದೇವ್, ದೆಹಲಿ-ಬಾಂಬೆಗೂ ಹಾರುತ್ತ, ಸಾಹಿತಿ, ಕಲಾವಿದ, ರಂಗಕಲಾವಿದ-ಮೂವರೂ ಸೇರಿ ಸಾಧಿಸಬೇಕಾದ್ದು ಸಾಕಷ್ಟಿದೆ ಎಂಬುದನ್ನು ಒತ್ತಿ ಹೇಳುತ್ತಾರೆ. ಬಸವನಗುಡಿಯ ವಿಶಾಲ ಮನೆಯೇ ಸದ್ಯಕ್ಕೆ ಮಿನಿ ಚೋಳಮಂಡಲ. ಮುಂದೆ ಇಲ್ಲೇ ಕಾವ್ಯವಾಚನ, ಸಾಹಿತಿ-ಕಲಾವಿದರೊಂದಿಗಿನ ಚರ್ಚೆ, ಇತ್ಯಾದಿ ಏರ್ಪಡಿಸುವ ಆಶಯ ಕೂಡಾ ವಾಸುದೇವ್‌ಗಿದೆ. ಸದಾ ಕ್ರಿಯಾಶೀಲರ, ಬೌದ್ಧಿಕ ಚಿಂತಕರ ಜೊತೆ 'ಅನ್ವೇಷಣೆ' ಇದ್ದೇ ಇರುತ್ತದೆಂದು ಹೇಳುತ್ತ; ಕರ್ನಾಟಕದಲ್ಲಿ ವಾಸುದೇವ್ ಈ ನಂತರ ಹೆಚ್ಚು ಕ್ರಿಯಾಶೀಲರಾಗಲೆಂದು ಆಶಿಸುವ.

—ಸಂಪಾದಕ

# ಕನ್ನಡ ಲಿಪಿ ಸಂಜ್ಞೆಗಳ ಕುರಿತ: ಒಂದು ಅನಿಸಿಕೆ

—ಯು. ಕೃಷ್ಣಶರ್ಮಾ

ಅಚ್ಚು, ಬೆರಳಚ್ಚು ಹಾಗೂ ಕಲಿಕೆಯಲ್ಲಿ ನಮ್ಮ ಮುಂದಿನ ಪೀಳಿಗೆಯ ಶ್ರಮವು ಕೊಂಚ ಕಡಿಮೆಯಾಗಿ ಸೌಲಭ್ಯವು ಹೆಚ್ಚೀತೆಂಬ ದೃಷ್ಟಿಯಿಂದ ಈಗಿರುವ ಕನ್ನಡ ಲಿಪಿ ಸಂಜ್ಞೆಗಳ ಪೈಕಿ ಕೆಲವನ್ನು ತೆಗೆದುಹಾಕಿ ಆ ಸಂಜ್ಞೆಗಳ ಬದಲು ಸರಳ–ಸುಲಭ ವಾದ ಇನ್ನೊಂದು ವಿಧಾನವನ್ನು ಅನುಸರಿಸುವ ಕುರಿತು ವಿದ್ವಾಂಸರು ಚರ್ಚೆ ನಡೆಸಿ ದ್ದಾರಷ್ಟೇ. (ನೋಡಿ : 'ಕನ್ನಡದಲ್ಲಿ ಈಗ ಇರುವಷ್ಟು ಲಿಪಿ ಸಂಜ್ಞೆಗಳು ಬೇಕೇ ?' ಶ್ರೀ ಎಸ್. ಶಂಕರನಾರಾಯಣಭಟ್ಟ : ಕನ್ನಡನುಡಿ : ಏಪ್ರಿಲ್ 87) ಶ್ರಮವಿಲ್ಲದೇ ಉದ್ದೇಶ ಸಿದ್ಧಿಸುವುದಾದರೆ ಈ ಬದಲಿ ವಿಧಾನವು ಸ್ವೀಕಾರಾರ್ಹವೆನಿಸಲಡ್ಡಿಯಿಲ್ಲ. ಮಂಡಿಸಲ್ಪಟ್ಟ ಸಲಹೆಯ ಮೇರೆಗೆ ನೋಡಿದಾಗ ಈ ಬದಲಿ ವಿಧಾನದಿಂದ ಅಚ್ಚು, ಬೆರಳಚ್ಚು ಹಾಗೂ ಕಲಿಕೆಗಳಲ್ಲಿ ಕೊಂಚ ಸೌಲಭ್ಯವೆನಿಸುವುದರ ಜೊತೆಯಲ್ಲಿ ಒಂದಿಷ್ಟು ಗೊಂದಲವೂ ಗಂಟುಬೀಳುವ ಸಂಭವವಿದೆಯೆನಿಸುತ್ತದೆ. ಹೇಗೆಂದರೆ :–

೧) ಈಗ ಇರುವ ಹದಿನಾಲ್ಕು ಸ್ವರಾಕ್ಷರ ಚಿನ್ಹೆಗಳ ಪೈಕಿ 'ಅ'–ಒಂದನ್ನು ಉಳಿಸಿ ಕೊಂಡು ಅದಕ್ಕೆ ಕಾಗುಣಿತಗಳನ್ನು ಸೇರಿಸಿ ಮಿಕ್ಕ ಸ್ವರಗಳನ್ನು ರೂಪಿಸಿಕೊಳ್ಳುವ ವಿಧಾನವೇ ಹೆಚ್ಚು ವೈಜ್ಞಾನಿಕ–ಎಂಬೀ ಸಲಹೆ ಯುಕ್ತವೇ ಸರಿ. ಈ ವಿಧಾನವನ್ನು ಬಳಕೆಗೆ ತಂದರೆ ಬೋಧನೆ ಕಲಿಕೆಗಳಲ್ಲಿ ಅನುಕೂಲತೆಯುಂಟು. ಆದರೆ ಈಗಿರುವ 'ಏ' ಸಂಜ್ಞೆಯ ಬದಲು ಅಕಾರಕ್ಕೆ ಏತ್ವ ಕಾಗುಣಿತ ಸೇರಿಸಿ ರೂಪಿಸಿದ 'ಅೇ' ಎಂಬೀ ಸಂಜ್ಞೆಯನ್ನು ಬರೆಯುವುದಾಗಲೀ, ಬೆರಳಚ್ಚಿಸುವದಾಗಲೀ ಮೊದಲಿಗಿಂತ ಸುಖಕರ ವೇನೂ ಅಲ್ಲ.

೨) ಈಗಿರುವ ಮಹಾಪ್ರಾಣ ಸಂಜ್ಞೆಗಳ ಬದಲು ಅಲ್ಪಪ್ರಾಣಗಳ ಕೆಳಭಾಗದಲ್ಲಿ ಅಡ್ಡಗೆರೆಯೊಂದನ್ನು ರೇಖಿಸಿ ಮಹಾಪ್ರಾಣಸಂಜ್ಞೆಗಳನ್ನು ಸಾಧಿಸಬಹುದೆಂದು ಸಲಹೆ ಮಾಡಲಾಗಿದೆ. ಆದರೆ ಮುಂದೆ ಶ್ ಳ್ ಗಳನ್ನು ಕೈಬಿಟ್ಟು ಸ ಲ ಗಳ ಕೆಳಗೆ ಅಡ್ಡ ಗೆರೆ ರೇಖಿಸಿ ಸ= ಶ ಲ= ಳ ಎಂಬೀ ರೀತಿಯಲ್ಲಿ ಶ ಳ ಗಳನ್ನು ಗುರುತಿಸುವ ವಿಧಾನವು ಅಷ್ಟು ಸಮಂಜಸವೆನಿಸುವುದಿಲ್ಲ.

೩) ಅನುನಾಸಿಕ ಸಂಜ್ಞೆಗಳ ಪೈಕಿ ನ್ ಮ್ ಗಳೆರಡನ್ನು ಈಗಿರುವಂತೆಯೇ ಉಳಿಸಿ ಕೊಂಡು ಙ ಞ ಣ ಗಳನ್ನು ಕೈಬಿಟ್ಟು ಈ ಸಂಜ್ಞೆಗಳಿಗೆ ಬದಲಿ ವಿಧಾನವೊಂದನ್ನು ಅನುಸರಿಸಲು ಸೂಚಿಸಲಾಗಿದೆ. ಆಗ ಅನುನಾಸಿಕ ಸಂಜ್ಞೆಗಳನ್ನು ರೂಪಿಸುವಲ್ಲಿ ಏಕ ಸೂತ್ರತೆ ತಪ್ಪಿಹೋಗುತ್ತದೆ.

೪) ತಲೆಗಟ್ಟು ತೆಗೆದ ಮೂಲಾಕ್ಷರಗಳೇ ಒತ್ತಕ್ಷರಗಳೆಂದು ಸ್ವೀಕರಿಸಲು ಸೂಚಿಸಿದೆ. ಇದೀಗ ನ ಮತ್ತು ಸ ಗಳ ಒತ್ತಕ್ಷರಗಳೆರಡೂ ಒಂದೇ ತೆರನೆಂದಾಯಿತು. ಅರ್ಥಾತ್

'ಆಯುಸ್ಸು' ಎಂದು ಬರೆದುದನ್ನು 'ಆಯುಷ್ಯು' ಎಂದು ಓದುವ ಸಂಭವವಿದೆ. ಸ-ಒತ್ತನ್ನು ಸೂಚಿಸಲು 'ಸಿ' ಎಂಬೀ ರೀತಿಯಲ್ಲಿ ಚುಕ್ಕೆಯೊಂದನ್ನು ಇಟ್ಟು ಕೊಳ್ಳೋಣವೆಂದರೆ-ಸ-ಕಾರದ ಕೆಳಗೆ ಚುಕ್ಕೆಯಿಟ್ಟರೆ ಅದು 'ಷ' ಸಂಜ್ಞೆಯಾಗು ತ್ತದೆಂಬುದರ ಪ್ರಕಾರ 'ಮನಸ್ಸು' ಎಂದು ಬರೆದುದನ್ನು 'ಮನುಷ್ಯು' ಎಂದು ಓದುವದು ಸಂಭವ.

೫) 'ಉಚ್ಚರಿಸುವದೊಂದು ಕಡೆಯಾದರೆ ಬರೆಯುವದು ಇನ್ನೊಂದು ಕಡೆ, ಎಂಬಂತಹ ಎಡಬಿಡಂಗಿಯೆನಿಸುವ ಅರ್ಕಾರ ಚಿನ್ಹೆ 'ᖊ' ಯನ್ನು ಕೈಬಿಡಲು ಸಲಹೆ ಮಾಡಲಾಗಿದೆ. ಬರೆಯಲು ಸುಕರವಾದ ಈ 'ᖊ' ಅರ್ಕಾರ ಚಿನ್ಹೆಯನ್ನು ಕೈಬಿಡು ವದಕ್ಕಿಂತ ಉಚ್ಚಾರದ ಕ್ರಮದಲ್ಲೇ ಬರವಣಿಗೆಯಲ್ಲೂ-ಮುದ್ರಣ, ಬೆರಳಚ್ಚುಗಳಲ್ಲೂ ಕೂಡ-ಸರದಿಯಲ್ಲೇ ಗುರುತಿಸುವ ಪರಿಪಾಟಿಯನ್ನು ಬಳಕೆಗೆ ತರುವದು ಸೂಕ್ತ. ಅಂದರೆ 'ಅರ್ಕಾವೊತ್ತು' ಎಂಬುದನ್ನು 'ಅರ್ಕಾವೊತ್ತು' ಎಂಬೀಕ್ರಮದಲ್ಲಿ ಬರೆಯ ಬಹುದೆಂಬುದು ನನ್ನ ಮಾತಿನ ಆಶಯ.

ಇತ್ಥಂ ಚ ಕನ್ನಡ ಲಿಪಿ ಸಂಜ್ಞೆಗಳ ಕಡಿತದ ವಿಚಾರವಾಗಿ ಇನ್ನಷ್ಟು ಪರಾಮರ್ಶೆಗೆ ಅವಕಾಶವಿದೆಯೆಂಬುದಿಲ್ಲಿ ಸಾರಾಂಶ.

ಭಾರತೀಯ ಭಾಷೆಗಳೆಲ್ಲಕ್ಕೂ ಒಂದೇ ಲಿಪಿಯನ್ನು ಬಳಸಿದಲ್ಲಿ ತುಂಬಾ ಸೌಕರ್ಯವಿದೆ ಯೆಂಬ ಮಾತು ಆಗಾಗ ಕೇಳಿಬರುತ್ತದೆ. ಕೆಲವು ಅಂಶಗಳಲ್ಲಿ ಈ ಮಾತು ನಿಜವಿರ ಬಹುದಾದರೂ ಈ 'ಸರ್ವಭಾಷಾ ಸಾಮಾನ್ಯ ಲಿಪಿ ಯೋಜನೆ'ಯಿಂದ ಇನ್ನು ಕೆಲವು ಉಪದ್ರವಗಳೂ ಹುಟ್ಟಿಕೊಳ್ಳಲು ಅವಕಾಶವಾಗುತ್ತದೆ. ರಾಷ್ಟ್ರದ ಭಾವೈಕ್ಯವು 'ತನ್ನಂತೆ ಪರರ ಬಗೆಯುವ' ಹೃದಯ ಸಂಸ್ಕಾರದಲ್ಲಡಗಿದೆಯೇ ಹೊರತು ಸರ್ವಭಾಷಾ ಸಾಮಾನ್ಯ ಲಿಪಿ ಯೋಜನೆಯಲ್ಲಿ ಅಡಗಿಲ್ಲ. ಪ್ರಾಂತೀಯ ಭಾಷೆ, ಪ್ರಾಂತೀಯ ಲಿಪಿ ಗಳು ಆಯಾ ಸಂಸ್ಕೃತಿಯ ಮುಖ್ಯ ವಾಹಕಗಳೆನಿಸುತ್ತವೆ. ಪ್ರಾಂತೀಯ ಲಿಪಿಯನ್ನು ಕೈಬಿಟ್ಟಾಗ ಆ ಸಂಸ್ಕೃತಿಯ ಅಂಗವೊಂದು ಊನವಾದಂತೆಯೇ ಸರಿ.

* * * *

ಮೈಸೂರಿನ ಶ್ರೀ ಜಗನ್ನಾಥ ಅವರು "ಭಾರತೀ ಲಿಪಿ" ಎಂಬ ಹೆಸರಿನಿಂದ ಸ್ವೋಪಜ್ಞ ಲಿಪಿಯೊಂದನ್ನು ರೂಪಿಸಿ ಸುಧರ್ಮಾದಲ್ಲಿ ಪ್ರಕಟಿಸಿದ್ದರು. ಇದು ಅಚ್ಚು, ಬೆರಳಚ್ಚು ಹಾಗೂ ಕಲಿಕೆಗೆ ಸುಲಭವೆಂದೂ, ಈ ಲಿಪಿಯನ್ನು ಯಾವುದೇ ಭಾರತೀಯ ಭಾಷೆಗೂ ವಾಹಕವಾಗಿ ಬಳಸಬಹುದೆಂದೂ ಕೂಡ ಶ್ರೀಯುತರ ಅಭಿಪ್ರಾಯ. ತುಳು, ಕೊಡವ, ಕೊಂಕಣಿಯೇ ಮೊದಲಾದ ಲಿಪಿಯಿಲ್ಲದ ಭಾಷೆಗಳು ಈ ಭಾರತೀ ಲಿಪಿ (ಜಗನ್ನಾಥ ಲಿಪಿ) ಯನ್ನು ಬಳಸಿ ನೋಡಬಹುದು. ○

# ಡಿ. ಆರ್. ನಾಗರಾಜರ ಶಕ್ತಿ-ಶಾರದೆ

—ಡಾ॥ ಪ್ರೋ॥ಲಂಕಿ ರಾಮಮೂರ್ತಿ

ಡಿ. ಆರ್. ನಾಗರಾಜರ "ಅಮೃತ ಮತ್ತು ಗರುಡ" (1983), ಆರ್ಕೆ ಯವರ "ವಾಸ್ತವ" (1984), ಕೆ. ಜಿ. ನಾಗರಾಜಪ್ಪನವರ "ಮರುಚಿಂತನೆ" (1985) ಈ ದಶಕದ ಪೂರ್ವಾರ್ಧದ ಅತ್ಯಂತ ಸ್ವೋಪಜ್ಞ ವಿಮರ್ಶೆಗಳೆಂದು ನಾನು ತಿಳಿದಿದ್ದೇನೆ. ಈ ಮೂವರು ವಿಮರ್ಶಕರಲ್ಲಿ ವಿದ್ವತ್ತಿನ ಪರಿಶ್ರಮ, ಸಂವೇದನೆಯ ಪ್ರಾಮಾಣಿಕತೆ, ಚಿಂತನೆಯ ಸ್ಫಂತಿಕೆ–ಎಲ್ಲಕ್ಕಿಂತಲೂ ಹೆಚ್ಚಾಗಿ ಚಿಂತನೆಯ ಸ್ವಂತಿಕೆ–ಎದ್ದು ಕಾಣು ವಷ್ಟು, ಪ್ರಖರವಾದುವಲ್ಲದೆ, ನಮ್ಮ ವಿಮರ್ಶೆಗೆ ಹೊಸ ಕ್ರಾಂತಿಕಾರೀ ತಿರುವನ್ನು ಕೊಟ್ಟವುಗಳು. ಹೀಗಿರುವಲ್ಲಿ ನಾವು ಈ ವಿಮರ್ಶಕರಿಂದ ಇನ್ನೂ ಇಂಥಾ ಸ್ವೋಪಜ್ಞ ಬರವಣಿಗೆಗಳನ್ನು ಅಪೇಕ್ಷಿಸುತ್ತಿರುವುದು ಸಹಜವಾಗಿದೆ. ಆದರೆ "ಅಮೃತ ಮತ್ತು ಗರುಡ"ದ ಡಿ. ಆರ್. ನಾಗರಾಜರಿಂದ 1987 ರಲ್ಲಿ ಹೊರಬಂದ "ಶಕ್ತಿ–ಶಾರದೆಯ ಮೇಳ" ಈ ಆಶ್ವಾಸನೆಯನ್ನು ವಂಚಿಸುತ್ತಿರುವುದು ತುಂಬಾ ವಿಷಾದದ ಮಾತಾಗಿದೆ. ಒಂದು ವಿಶೇಷ ರೀತಿಯಲ್ಲಿ ನಾಗರಾಜರ "ಶಕ್ತಿಶಾರದೆಯ ಮೇಳ" ನಾಗರಾಜಪ್ಪನವರ "ಮರುಚಿಂತನೆ"ಗೆ ಸಂಪೂರ್ಣ ವಿರುದ್ಧವಾದ, ಅಂದರೆ, ಅವರದು ಎಷ್ಟು ಕ್ರಾಂತಿಕಾರೀ ಹೊಸದೋ ಇವರದು ಅಷ್ಟೇ ರಿಯಾಕ್ಷನರೀ ಹಳತಾದ ಪುಸ್ತಕವೆನ್ನಬೇಕಾಗುತ್ತದೆ.

ವಿಮರ್ಶಕನು ಯಾವಾಗಲೂ ಗೆದ್ದುಕೊಳ್ಳಬೇಕಾದ ಚಪಲ ವಿದ್ವತ್ತಿನದು. ಯಾಕೆಂದರೆ ವಿದ್ವತ್ತು, ಪಾಂಡಿತ್ಯ ಎನ್ನುವುದು ಯಾರೂ ಮೈ ಬಗ್ಗಿಸಿದರೆ ದಕ್ಕುವ ದುಡಿಮೆ ಅದು. ಆದರೆ ಆ ವಿದ್ವತ್ತಿನ ಸಂಚಯ ಚಿಂತನೆಗೆ, ಹೊಸ ಯೋಚನೆಯ ಸ್ವಂತಿಕೆಗೆ, ಸಾಮಾನ್ಯವಾಗಿ ಬಹಳ ಪೂರಕವಾದದ್ದು. ವಿದ್ವತ್ತಿನ ಜಾಯಮಾನವೆಂಥಾದ್ದೆಂದರೆ ಅದು ಅನೇಕ ವೇಳೆ ಚಿಂತನೆಯ ವೇಷವನ್ನು ಧರಿಸುವ, ಸ್ವೋಪಜ್ಞತೆಯ ಮುಸುಕನ್ನು ಹಾಕಿಕೊಳ್ಳುವ ತಾನು ಹೊಸತಿನ ಕಾಣ್ಕೆ ಎಂದುಕೊಂಡು ಮೆರೆಯುವ, ಖದೀಮ ತನದ್ದು. ಆದಕ್ಕೇ ಲೀವಿಸನು ರೀನೀವೆಲಕನಂಥಾ "ಪ್ರಾಖಾಂಡ ಪಂಡಿತ"ನು ವಿಮರ್ಶೆಗೆ ತತ್ವಸಾಸ್ತ್ರಗಳ, ವಿದ್ವತ್ತಿನ ಹಿನ್ನೆಲೆ, ಬೆಂಬಲ ಬೇಕು ಎಂದಾಗ ಸಾಹಿತ್ಯದ ಓದಿಗೆ ಓದಿನ ಪೂರ್ಣತೆಯೇ, ಓದಿನ ಮನಸ್ಸಾಕ್ಷಿಯೇ ಸಾಕು ಎನ್ನುತ್ತಾ an ideal reader is an ideal critic, ಅಂದರೆ ಆದರ್ಶೀ ಓದುಗನೇ ಆದರ್ಶೀ ವಿಮ ರ್ಶಕನೆನ್ನುವ ಸತ್ಯವನ್ನು ಸಾಬೀತು ಮಾಡಿದನು. ಇದೇ ಅರ್ಥದ ಮಾತನ್ನೇ ಅಂದರೆ ವಿದ್ವತ್ತು ಹೇಗೆ ಚಿಂತನೆಯನ್ನು, ಸಂವೇದನೆಯನ್ನು ಮಾರಿತಪ್ಪಿಸುತ್ತದೆ, ಹೇಗೆ ಪರಂಪರೆಯ ವಿದ್ಯಾಸಂಸ್ಥೆಗಳಲ್ಲಿ ವಿದ್ವತ್ತನ್ನು ಸಂಪಾದಿಸಿದ ವಿದ್ವಾಂಸ, ಸಂವೇದನೆ ಯಲ್ಲಿ ಭಾವದ ಅನುಭವದಲ್ಲಿ ಫೇಟ್ ಗವಾರನಾಗಿರುತ್ತಾನೆ. The more

scholastically educated a man is generally, the more he is an emotional boor, ಎನ್ನುತ್ತಾನೆ, ಡಿ. ಎಚ್. ಲಾರೆನ್ಸ್.

ಡಿ. ಆರ್. ನಾಗರಾಜರನ್ನ ಬೇತಾಳನಂತೆ ಬೆನ್ನೇರಿರುವುದು ಅವರ ವಿದ್ವತ್ತು. ಕೆಲವೆಡೆಗಳಲ್ಲಿ, ಅವರ ವಿದ್ವತ್ತಿನ ಪ್ರತಿಷ್ಠೆ ಅಧಿಕ ಪ್ರಸಂಗ ಎಷ್ಟಾಗಿಬಿಟ್ಟಿದೆಯೆಂದರೆ, ಅದು ಅವರ ವಿಮರ್ಶೆಯ ಜಾಡನ್ನೇ ತಪ್ಪಿಸಿದೆ. ಅವರು ತಮ್ಮ "ತುಷಾರ" ಸಂದರ್ಶನದಲ್ಲಿ, ಒಬ್ಬ ವಿದ್ವಾಂಸನನ್ನು ಉದ್ಧರಿಸುತ್ತಾ, ವಿಮರ್ಶೆ ಒಂದು ತಾತ್ವಿಕ ನಿಲುವಿನಿಂದ ಬದ್ಧವಾಗಿರಬೇಕೆನ್ನುವರ್ಥದ ಮಾತಾಡುತ್ತಾರೆ. ನನಗೆ ತಿಳಿಯುವ ಹಾಗೆ, ನಾಗರಾಜರ ಈ ಬದ್ಧತೆಯೇ ಅದು ಎಗ್ಸಿಸ್ಟೆನ್ಸಿಷಲಿಯಮ್ಮೋ ಮಾರ್ಕಿಸಮ್ಮೋ, ಏನೇ ಆಗಲಿ–ಅವರ ವಿಮರ್ಶೆಯನ್ನು ದಾರಿ ತಪ್ಪಿಸಿದೆ ಎನಿಸುತ್ತದೆ ನನಗೆ.

ಈ ಪ್ರಸ್ತುತದಲ್ಲಿ ಕೆ. ಜಿ. ನಾಗರಾಜಪ್ಪನವರ "ಮರುಚಿಂತನೆ" ಬಹಳ ಸೂಕ್ತವಾಗಿ ಉದಹರಿಸಬೇಕಾದ ಪುಸ್ತಕ. "ಮರುಚಿಂತನೆ"ಯಂತೂ ನವ್ಯ ವಿಮರ್ಶಾ ಸಂದರ್ಭದಲ್ಲಿ, ಲೀವಿಸಿನ "ರಿವಾಲ್ಯುಯೇಷನ್" (ಮರುಮಾಪನೆ), ಇಂಗ್ಲೆಂಡಿನ ಆ ವಿಮರ್ಶಾ ಸಂದರ್ಭದಲ್ಲಿ ಎಷ್ಟು ಪರಿಣಾಮಕಾರಿಯಾಗಿತ್ತೋ, ಅಷ್ಟೇ ಮಟ್ಟದ ಪರಿಣಾಮಕಾರಿ ಎಂದೆನಿಸುತ್ತದೆ. "ಮರುಚಿಂತನೆ" ಅನ್ವರ್ಥನಾಮದಂತೆ, ನಿಜಕ್ಕೂ ಮತ್ತೆ, ಹೊಸದಾಗಿ ಸ್ವಂತಿಕೆಯ ದಿಟ್ಟತನದಲ್ಲಿ ಮಾಡಿದ ಸ್ವೋಪಜ್ಞ ವಿಮರ್ಶೆ. ಇದರ ದಿಟ್ಟತನದ ಎಂಟೆರ್ದೆ ಎಂಥಾದ್ದೆಂದರೆ, ಇವರ ಆತ್ಮೀಯರು "ಪ್ರಸ್ತಾವನೆ" ಯಲ್ಲಿ ಹೇಳಿದ ಮಾತು ನಾವೂ ಹೇಳಬೇಕಾಗುತ್ತದೆ : "ಮಗು, ಬಿಚ್ಚುಮನಸ್ಸಿನಿಂದ ಸತ್ಯವನ್ನು ಬರೆದರೆ ಸಮಾಜ ನಿನ್ನನ್ನು ಜೀವಸಹಿತ ಬದುಕಲು ಬಿಡುವುದೆ ?"

ಯು. ಆರ್. ಅನಂತಮೂರ್ತಿಯವರು ಮುನ್ನುಡಿಯಲ್ಲಿ ಹೇಳಿದಂತೆ "ಮರುಚಿಂತನೆ" ನಮ್ಮ ಕಾಲದ ಬಹು ಮುಖ್ಯ ಸಾಂಸ್ಕೃತಿಕ ವಾಗ್ವಾದಗಳಿಗೆ ಒಂದು ಸ್ಪಷ್ಟ ದಿಕ್ಕನ್ನೂ, ಅರ್ಥಪೂರ್ಣತೆಯನ್ನೂ ತರಬಲ್ಲ ಮಹತ್ವದ ಕೃತಿ" ಎನ್ನುವುದು ಯಾವ ಓದುಗನಿಗೂ ಅನಿಸುವಂಥಾದ್ದು. ಉದಾಹರಣೆಗೆ ಅವರ ಈ ಒಂದೆರಡು, ಅನಂತಮೂರ್ತಿಯವರು ಸೂಕ್ತವಾಗಿ ಮುನ್ನುಡಿಯಲ್ಲಿ ಉದ್ಧರಿಸುವ, ಮಾತುಗಳು ಎಷ್ಟು ದಿಟ್ಟತನದ ಎಂಟೆರ್ದೆಯವು ನೋಡಿ : "ವೀರಶೈವ ಧರ್ಮ ಮಾನವರೆಲ್ಲರೂ ಸಮಾನರು ಎಂದು ಬೋಧಿಸಲಿಲ್ಲ–ಲಿಂಗದೀಕ್ಷಾಬದ್ಧರೆಲ್ಲರೂ ಸಮಾನರು ಮತ್ತು ಶಿವ ಸಹೋದರರು, ಎಂದು ಸಾರಿತು" (ಪು. 74) ; "ಲಿಂಗದೀಕ್ಷೆಯ ಶಿವಶರಣತದ್ದು ಕಾಯಕವಾಗುತ್ತದೆಯೇ ಹೊರತು, ಭವಿಗಳ ಕೆಲಸ ಕಾಯಕವಾಗುವುದೇ ?"

ಈ ಮಾದರಿಯ ದಿಟ್ಟತನವನ್ನು ನಾಗರಾಜರು ತೋರಿಲ್ಲವೇತಲ್ಲ. ಉದಾಹರಣೆಗೆ "ಅಮೃತ ಮತ್ತು ಗರುಡ"ದಲ್ಲಿನ ಈ ನಿಲುವನ್ನು ನೋಡಿ :

> ನವ್ಯ ಸಾಹಿತ್ಯದಲ್ಲಿ ಅಡಿಗರದೊಂದು ವಿಶಿಷ್ಟ ಪ್ರತಿಭೆ. ಉತ್ಸಾಹದ ಸಮಾಜವಾದಿ ಕವಿಯಾಗಿ ಮೊದಲಲ್ಲಿ ಕಂಡುಬರುವ ಇವರು ನಂತರ ಆದದ್ದೇ ಬೇರೆ.

ರಿವೈವಲಿಸ್ಟ್ ಎನ್ನಬಹುದಾದ, ವೈದಿಕ ಚೌಕಟ್ಟಿನ ತುಡಿತಗಳೇ ಇವರ ಕಾವ್ಯದ ಜೀವಾಳ. ಇಂಥ ವಸ್ತುವನ್ನು ಉಳ್ಳ 'ಭೂತ', 'ಶ್ರೀರಾಮನವಮಿಯ ದಿವಸ' ಮುಂತಾದ ಪದ್ಯಗಳ ಯಶಸ್ಸು ನಿಜಕ್ಕೂ ಆಶ್ಚರ್ಯಕರವಾದದ್ದು. ಅಡಿಗರ ಶ್ರೇಷ್ಠ ಪದ್ಯಗಳ ತುಡಿತವೆಲ್ಲವೂ ನೀಲಿ ಹೇಳಿದ ಬಗೆಯದೇ. ಅಡಿಗರ ತಾತ್ವಿಕ ನೆಲೆಯಲ್ಲಿ ಜನ ವಿರೋಧಿ ನಿಲುವು ಕೂಡಾ ಮುಖ್ಯ ಸ್ಥಾನವನ್ನು ಪಡೆದಿದೆ. ಜನರ ಹೆಸರಿನಲ್ಲಿ 'ವ್ಯಕ್ತಿ'ಯ ಚಹರೆ ತೊಡೆದು ಹಾಕುವವರ ವಿರುದ್ಧ, ತಲೆವಿದುಳ ತೆಗೆದು ಸ್ವನಿರ್ವಹಣೆ ಹಾಕುವ ಎಲ್ಲ ಪ್ರಯತ್ನಗಳ ವಿರುದ್ಧ ಅಡಿಗರು ಪ್ರತಿಭಟಿಸುತ್ತಾರೆ. ಈ ಥರದ ಅಮೂರ್ತ ವ್ಯಕ್ತಿ ಸ್ವಾತಂತ್ರ್ಯಗಳನ್ನು ಉಳಿಸಿಕೊಳ್ಳುವ ಹೋರಾಟ ಕೊನೆಯಾಗುವುದು ಜನತಾ ರಾಜ್ಯವನ್ನು ವಿರೋಧಿಸುವಲ್ಲಿ; ಗೊಂದಲಪುರದಂಥ ಪದ್ಯಗಳ ಬಿಗಿ ಇರುವುದೇ ಇಂಥ ನಿಲುವಿನ ತೀವ್ರ ಪ್ರತಿಪಾದನೆಯಲ್ಲಿ ಅಡಿಗರು ಜನಸಂಘ ಸೇರಿ ಚುನಾವಣೆಗೆ ನಿಲ್ಲುವ ತಾತ್ವಿಕತೆಗೂ, ಅವರ ಕಾವ್ಯದ ತಾತ್ವಿಕತೆಗೂ ಖಂಡಿತ ಸಂಬಂಧ ಇದೆ. ಸಾಮಾನ್ಯ ಮನುಷ್ಯನ ಆಡಳಿತದಲ್ಲಿ ವ್ಯಕ್ತಿಸ್ವಾತಂತ್ರ್ಯ ನಾಶವಾಗುತ್ತದೆ ಎಂದು ಇವರಿಗೆ ಭಯ. ವಾಸ್ತವವಾಗಿ ಜಾತಿ, ವರ್ಗಗಳಿರುವ ಸಮಾಜದಲ್ಲಿ ನಿಜವಾದ ಸ್ವಾತಂತ್ರ್ಯ ಸಾಧ್ಯವೇ ಇಲ್ಲ. ಆಧುನಿಕ ಕನ್ನಡ ಸಾಹಿತ್ಯದ ಶ್ರೇಷ್ಠ ಕವಿಗಳಾದ ಅಡಿಗರು ಇಂಥ ವಿಚಾರವನ್ನು ಹೊಂದಿರುವುದು ನಮ್ಮ ಸಂಸ್ಕೃತಿ–ಲೇಖಕರ ನಡುವಿನ ಸಂಬಂಧದ ಅನೇಕ ಸೂಕ್ಷ್ಮಗಳನ್ನೂ ತಿಳಿಯುವಲ್ಲಿ ಸಹಾಯ ಮಾಡುತ್ತದೆ.

–ಅಮೃತ ಮತ್ತು ಗರುಡ, ಪು. 46

ಆದರೆ ಅದೇ ನಿಲುವು "ಶಕ್ತಿಶಾರದೆಯ ಮೇಳ"ದ ಹೊತ್ತಿಗೆ ಏನಾಗಿದೆ ನೋಡಿ :

ಒಟ್ಟಾರೆಯಾಗಿ, ಅಡಿಗರ ಕಾವ್ಯದಲ್ಲಿ ನಾವು ಗಮನಿಸಬೇಕಾದದ್ದು ವ್ಯಕ್ತಿ ವಿಶಿಷ್ಟತೆ ಮತ್ತು ಅಂತರಂಗದ ಪಾವಿತ್ರ್ಯತೆಯ ಬಗ್ಗೆ ಒತ್ತು. ಒರಟು ಸಮಾಜವಾದಿಗಳಿಗೆ "ಬೂರ್ಶ್ವಾ" ಗುಣಗಳಂದೆ ಕಾಣಬಹುದಾದರೂ, ದಿನೇ ದಿನೇ ಸರ್ವಾಧಿಕಾರತ್ವ ಹೆಚ್ಚಾಗುತ್ತಿರುವ ಇಂದಿನ ಬದುಕಿನಲ್ಲಿ ಆ ಗುಣಗಳ ಬೆಳವಣಿಗೆ ಒಂದು ರೀತಿಯ ಪ್ರಬುದ್ಧ ಪ್ರತಿಭಟನೆ ಕೂಡಾ ಹೌದು. ಈ ಅರ್ಥದ ಮಾತುಗಳನ್ನೇ ಹರ್ಬರ್ಟ್ ಮಾರ್ಕ್ಯೂಸ್ ತನ್ನ ಕಡೆಗಾಲದ ಕೃತಿ 'ದಿ ಈಸ್ತಟಿಕ್ ಡೈಮನ್‌ಶನ್' ನಲ್ಲಿ ಹೇಳಿದ : ವ್ಯಕ್ತಿಯ ಕಲ್ಪನೆಯನ್ನು ಬೂರ್ಶ್ವಾ ಪರಿಕಲ್ಪನೆಯೆಂದು ನಿರಾಕರಿಸುವುದು ಫ್ಯಾಸಿಸ್ಟ್ ಚಿಂತನೆಯನ್ನು ನೆನಪಿಸುತ್ತದೆ.

ವಿಮೋಚಿತ ವ್ಯಕ್ತಿಗಳ ಸಂಘಟನೆಯೇ ಹೊಸ ಸಮಾಜದ ಅಡಿಗಲ್ಲು. ಅವರಲ್ಲಿ ವ್ಯಕ್ತಿ ವಿಶಿಷ್ಟತೆ ಮತ್ತು ಸಮಾಜೀಕರಣ ಎರಡೂ ಒಟ್ಟೊಟ್ಟಿಗೇ ಸಾಗುತ್ತಿರುತ್ತದೆ. ವ್ಯಕ್ತಿ ಮತ್ತು ಸಮಾಜದ ನಡುವೆ ಸೃಜನಾತ್ಮಕ ಸಂಘರ್ಷವನ್ನು

ಈ ದೃಷ್ಟಿಕೋನ ಹೇಳುತ್ತದೆ. ಅಡಿಗರ ಕಾವ್ಯ ವ್ಯಕ್ತಿ ಮತ್ತು ಸಮಾಜವನ್ನು ಕುರಿತಂತೆ ಹೇಳುವ ಅನುಭವದ ಸತ್ವ ಕೂಡ ಮೂಲತಃ ಇದೇ.

(ಶಕ್ತಿ–ಶಾರದೆಯ ಮೇಳ, ಪು. 408)

ನಾಗರಾಜರ ಈ ಹಿಮ್ಮೆಟ್ಟು ಕೇವಲ ವಿದ್ಯುತ್ತಿನ ಕುಮ್ಮಕ್ಕಿನಿಂದ ಮುಮ್ಮೆಡುವಂತೆ ಕಾಣುತ್ತಿದೆ–ಹರ್ಬರ್ಟ್ ಮಾರ್ಕ್ಯೂಸಿನ ಉದ್ಧರಿತ ಮಾತುಗಳಿಂದ. ನಾಗರಾಜರು ಏನು ಇಲ್ಲಿ ವಿಮರ್ಶಕರಾಗಿ ಅಡಿಗರ ಪದ್ಯದಲ್ಲಿ ಸಾಬೀತು ಮಾಡಿತೋರಿಸ ಬೇಕಾಗಿತ್ತೆಂದರೆ, ಅಡಿಗರ "ನಾನು ಹಿಂದೂ ನಾನು ಬ್ರಾಹ್ಮಣ" ಎನ್ನುವಂಥಾ ಧೋರಣೆಗಳು ಹೇಗೆ "ವಿಶಿಷ್ಟತೆ", ಹೇಗೆ "ಪ್ಯಾಸಿಸ್ಟ್" ಅಲ್ಲ–ಯಾವರೀತಿಯಲ್ಲಿ "ನಾನು ಹಿಂದೂ" ಎನ್ನುವ ನಿರ್ದಿಷ್ಟ ಧರ್ಮದ "ನಾನು ಬ್ರಾಹ್ಮಣ" ಎನ್ನುವ ಪ್ರತ್ಯೇಕ ಜಾತೀಯ ಧೋರಣೆ ಟ್ರೈಬಲ್, ರೇಸಿಸ್ಟ್, "ಪ್ಯಾಸಿಸ್ಟ್" ಧೋರಣೆ ಯಾಗದೆ, ನಿಜಕ್ಕೂ ಮಾರ್ಕ್ಯೂಸಿನ ಪರಿಕಲ್ಪನೆಯ ವ್ಯಕ್ತಿ "ವಿಶಿಷ್ಟತೆ" ಯಾಗಿದೆ ಎನ್ನುವುದು; ಅಲ್ಲದೆ ಅವರ ಅನೃತ ಮತ್ತು ಗರುಡದ ಆ ಹಿಂದಿನ ಮಾತನ್ನ ಅವರ ಈಗಿನ ಶಕ್ತಿಶಾರದೆಯ ಈ ಮಾತು ಹೇಗೆ, ಏಕೆ ಮತ್ತು ಯಾವರೀತಿಯಲ್ಲಿ ಅಲ್ಲಗಳೆ ಯುತ್ತದೆ, ಎನ್ನುವುದು. ಅದಿಲ್ಲದಿದ್ದಾಗ ಇದು ಒಂದು ಅಂದಿರಿಕೆ–ಮಂಚಿವಾಡು–ಅನಂತಯ್ಯನ ರಾಜಿ ಮಾತಾಗಿ ಬಿಡುತ್ತದೆ–ವಿಮರ್ಶೆಯಾಗುವುದಿಲ್ಲ.

ನಾಗರಾಜರು "ಅಧ್ಯಯನದ ಹಿಂದಿನ ತಾತ್ವಿಕ ನೆಲೆಗಳು" ಎನ್ನುವ ತಮ್ಮ ಪುಸ್ತಕದ ಮೊದಲ ಅಧ್ಯಾಯದಲ್ಲೇ ವಿಮರ್ಶಕರಾಗಿ ಊನಗೊಂಡಿದ್ದಾರೆ. ಅವರ ಅಧ್ಯಯನದ ನೆಲೆ ತಾತ್ವಿಕವಲ್ಲ–ಜೈವಿಕವಾಗಿರಬೇಕಾಗಿತ್ತು, ಜೈವಿಕ ಧಾತು ಅಥವ ಮೌಲ್ಯ (values of life) ಗಳಾಗಿರಬೇಕಾಗಿತ್ತು. ಯಾಕೆಂದರೆ, ಇವರು ಪುಸ್ತಕದಲ್ಲಿ ಅದ್ವೈತದ, ಅರವಿಂದರ ಮಾತನ್ನಾಡುತ್ತಾ, ಆ ತಾತ್ವಿಕ ನೆಲೆಗಳಲ್ಲಿ ಬೇಂದ್ರೆ, ಕುವೆಂಪುರವರ ಕಾವ್ಯವನ್ನು ವಿಮರ್ಶಿಲು ಹೊರಟಾಗ, ಅನಿವಾರ್ಯವಾಗಿ ದ್ವೈತ ವಿಶಿಷ್ಟಾದ್ವೈತಗಳನ್ನು, ಇನ್ನಿತರ ತಾತ್ವಿಕ ನೆಲೆಗಳಾದ ಲೋಕಾಯುತ, ಮೆಟೀರಿಯ ಲಿಸಂ, ಎಗ್ಸಿಸ್ಟೆನ್ಷಿಯಲಿಸಂ, ಇತ್ಯಾದಿಗಳಿಗೆ ಬೆನ್ನು ತಿರುಗಿಸುತ್ತದಲ್ಲದೆ, ಮೌಲಿಕವಾಗಿ ಅದ್ವೈತವನ್ನೇ, ಅರವಿಂದವನ್ನೇ ಪರಮ ಮೌಲ್ಯವೆಂದು ಎತ್ತಿ ಹಿಡಿಯುತ್ತದೆ–ಆ ಮೂಲಕ ಆ ಕಾವ್ಯವೂ ಮಹತ್ವಪಡೆಯುತ್ತದೆ. ಉದಾಹರಣೆಗೆ ಈ ಮಾತು ನೋಡಿ :

> ಬೇಂದ್ರೆಯವರ ಕಾವ್ಯದಲ್ಲಿ 'ಬೆಳಕಿಗೆ' ಇಷ್ಟೆಲ್ಲಾ ಅರ್ಥದ ಆಯಾಮುಗಳಿರುವುದ ರಿಂದಲೇ, ಅವರ ಕಾವ್ಯದ ಮೂಲಭೂತ ಆರಾಧನಾ ಸ್ಥಾನಗಳಲ್ಲೊಂದಾಗಿದೆ ಈ ಶಕ್ತಿ. ಈ ಬೆಳಕಿನ ಪ್ರವಾಹಕ್ಕೆ, ಮುಂಜಾವಿಗೆ ಮೈವೊಡ್ಡುವುದೆಂದರೆ ಹೊಸ ಜೀವನದ, ವಿಕಾಸದಲ್ಲಿಯ ದಿವ್ಯ ಘಟ್ಟದ ಪರಿವರ್ತನೆಗೆ ತಮ್ಮನ್ನು ತಾವು ಕೊಟ್ಟುಕೊಂಡಂತೆ. ಅರವಿಂದರ ತತ್ವಜ್ಞಾನದ ನಿಟ್ಟಿನಿಂದ ಹೇಳುವು ದಾದಕೆ, ಅದ್ವೈತದ ಅತ್ಯುಚ್ಚ ದರ್ಶನ ಅದು : ಈ ಲೋಕದ ಸಮಸ್ತದಲ್ಲೂ

ವ್ಯಾಪಿಸಿರುವ ಆ ಶಕ್ತಿಯೊಡನೆ ಒಂದಾಗುವುದು. ಬೇಂದ್ರೆಯವರ ಅತ್ಯಂತ ಜನಪ್ರಿಯ ಕವನಗಲ್ಲೊಂದಾದ "ಬೆಳಗು"ವಿನೊಳಗೆ ವಿದ್ಯುತ್ತಿನಂತೆ ಹರಿವ ದರ್ಶನ ಕೂಡ ಇದೆಯೇ.. ಭೂಮಿಯ ಬದುಕಿನಲ್ಲಿಯ ಹೊಸ ಅಧ್ಯಾಯದ ವಿಕಾಸದ ಸೂಚನೆ ಈ ಬೆಳಕು ತಾನೆ. (ಪು. 66)

ಈಗ ನಾಗರಾಜರ ಪ್ರಸ್ತಾವನೆ ನೆನೆಯಬೇಕು. ಅಲ್ಲ ಅವರು "ಶಾರದೆ ಎಂದರೆ ಜ್ಞಾನ" ... ಶಕ್ತಿ ಎಂದರೆ___ಅನುಭವ" (ಪು.8) ಎಂದವರು, ಬೇಂದ್ರೆ ಕವನದ "ಹೊಸ ಜೀವನದ, ವಿಕಾಸದಲ್ಲಿಯ ದಿವ್ಯಘಟ್ಟದ ಪರಿವರ್ತನೆ" "ಅರವಿಂದರ ತತ್ವಜ್ಞಾನದ ನಿಟ್ಟನಿಂದ.... ಅದ್ವೈತದ ಅತ್ಯುಚ್ಚ ದರ್ಶನ" ವೆನ್ನುವಲ್ಲಿ "ಜ್ಞಾನ" ಹೇಗೆ "ಅನುಭವ" ವಾಗಿದೆ ಅನ್ನುವುದನ್ನು ಸಾಬೀತು ಮಾಡಿದ್ದರೆ ಅವರ ವಿಮರ್ಶೆ ಸಾರ್ಥಕ ವಾಗುತ್ತಿತ್ತು. ಇಂಥಹ ಲೋಪವನ್ನೇ ಕುರಿತು, ಅನಂತಮೂರ್ತಿಯವರು ಮುನ್ನುಡಿ ಯಲ್ಲಿ ಪ್ರಸ್ತಾಪಿಸುತ್ತಾರೆ :

ಉದಾಹರಣೆಗೆ "ಹೂವು-ದೇವರು" (ಪು. 98) ಎಂಬ ಸಾಮಾನ್ಯ ಪದ್ಯದಲ್ಲಿನ ಅನುಭವ ಎಷ್ಟು ಸಾಚವೆನ್ನುವಂತೆ ಮಾಡಿದೆ ಎಂದು ನನಗೆ ಅನುಮಾನ ವಾಗುತ್ತದೆ : ಶ್ರೀ ನಾಗರಾಜರಿಗೂ— (ಒಟ್ಟನಲ್ಲಿ ಅವರೇ ಉಳಿದ ಕಡೆಗಳಲ್ಲಿ ನನಗೆ ಮನದಟ್ಟಾಗಿಸುವ ತಮ್ಮ ರಸಪ್ರಜ್ಞೆಯಿಂದಾಗಿ) ಈ ಅನುಮಾನ ವಿರಬೇಕಿತ್ತು ಎನ್ನಿಸುತ್ತದೆ. (ಪು. 4)

ಈ ಸಂದರ್ಭದಲ್ಲಿ ಬೇಂದ್ರೆಯವರ ಅದ್ವೈತ ಅಧ್ಯಾತ್ಮಗಳಿಗೆ ಮಾರುಹೋಗದೆ ಅವರ ಕಾವ್ಯವನ್ನು ವಸ್ತುನಿಷ್ಟವಾಗಿ, "ವಾಸ್ತವ" ವಾಗಿ ಗ್ರಹಿಸಲು ಹೊರಟ ಪ್ರಾಮಾಣಿಕ ವಿಮರ್ಶಕರಾದ ಆರ್ಕೆಯವರ ಈ ಎಚ್ಚರದ ಮಾತನ್ನು ಗ್ರಹಿಸಬೇಕು :

ಬೇಂದ್ರೆಯವರು ಉಪನಿಷತ್ತುಗಳು, ಸಾಂಖ್ಯತತ್ತ್ವಗಳಿಂದ ಪ್ರಭಾವಿತ ರಾದವರು. ಕಾಳಿದಾಸ, ಅರವಿಂದ, ಸರ್ವಜ್ಞ, ಅಲ್ಲಮ, ದಾಸರು ಮತ್ತು ಸಂತರುಗಳಿಂದಲೂ ತನ್ನ ಕಾವ್ಯಪ್ರೇರಣೆಯನ್ನು ರೂಪಿಸಿಕೊಂಡವರು. ಅವರ ಲೌಕಿಕ ಜೀವನದಲ್ಲಿ ಈ ಆಧ್ಯಾತ್ಮಿಕ ದೃಷ್ಟಿಕೋನ, ಅವರ ಎಲ್ಲ ಸಂವೇದನೆಗಳ ಹಿಂದೇ ಸ್ಥಾಯಿಯಾಗಿ ನಿಂತು ಅವರ ಸೃಜನಶೀಲತೆಯನ್ನು ನಿಯಂತ್ರಿಸುವಂತೆ ಕಂಡುಬರುತ್ತದೆ. ತನ್ನ ವ್ಯಕ್ತಿತ್ವಕ್ಕೆ ನಾಲ್ಕು ಮುಖಗಳಿವೆ ಎಂದು ಕೊಂಡರೂ ಇವರು ಎಂದೂ 'ವಿಮರ್ಶಕ ಬೇಂದ್ರೆ' ಯಾಗಿರಲಿಲ್ಲ ಎಂದೇ ಅನಿಸುತ್ತದೆ. ಪ್ರತಿಯಾಗಿ 'ಮಾಸ್ತರ್ ಬೇಂದ್ರೆ'ಯೇ ಇವರ ಬದುಕು ಕಾವ್ಯಗಳ ಸಂವೇದನಾಕ್ಷೇತ್ರದ ಕೇಂದ್ರಬಿಂದುವಾಗಿದ್ದಂತೆ ಕಾಣುತ್ತದೆ. ಅವರ ವ್ಯಕ್ತಿತ್ವದ ನಾಲ್ಕು ಮುಖಗಳ ಪರಸ್ಪರ ದೂರೀಕರಣ (alienation) ದಿಂದಾಗಿ ಉದ್ಭವಿಸಿದ ಅವರ ವ್ಯಕ್ತಿತ್ವದಲ್ಲಿನ ಬಿರುಕಿನಿಂದಾಗಿಯೇ ಅವರು ಪ್ರಾಯಶ : ಕುವೆಂಪು ಅವರಂತೆ 'ಮಹಾಕಾವ್ಯ' ವನ್ನೋ 'ಮಹಾಕಾದಂಬರಿ' ಯನ್ನೋ

> ಸೃಷ್ಟಿಸುವುದಾಗಲಿಲ್ಲ. 'ಪಾತರಗಿತ್ತಿ'ಯ ಒಯ್ಯಾರದ, ಚಪಲತೆಯ ಚಿತ್ತ ವೃತ್ತಿಯ ಕವಿ ಅಂಬಿಕಾತನಯದತ್ತ ತನ್ನ ಶಬ್ದಗಳ ಗುಂಗುಂ ಗಾನಕ್ಕೆ ತಾನೇ ಮಾರುಹೋಗುತ್ತಿದ್ದ ಆಸಾಮಿ. (ವಾಸ್ತವ. ಪು. 75)

ಬೇಂದ್ರೆಯವರ ಅಪ್ರೈಕೃತ-ಅರವಿಂದಕ್ಕೆ "ಶಬ್ದಗಳ ಗುಂಗುಂ ಗಾನಕ್ಕೆ" ಅರ್ಕೈಯುವರು ಇನ್ನೊಂದು ಕಡೆ ಹೇಳುವ "ಮೋಡಿ" (79) ಗೆ ಎಷ್ಟರ ಮಟ್ಟಿಗೆ ನಾಗರಾಜರು ಅನಾಯಾಸವಾಗಿ "ಮಾರುಹೋಗಿ" ದ್ದಾರೆಂದರೆ, ಅವರ ಈ [illegible] ದ ಅತಿರೇಕ, ಶಬ್ದಗಳ ಅತಿಸಾರ ಅನಿವಾರ್ಯವಾಗಿಬಿಡುತ್ತದೆ :

> ವಾಸ್ತವವಾಗಿ, ಈ ಕವನದ ಅರ್ಥ ನಿಚ್ಚಳವಾಗಿ ಹೊಳೆಯುವುದು ಬೇಂದ್ರೆಯವರ ಒಟ್ಟು ಕಾವ್ಯದ ಸಂದರ್ಭದಲ್ಲಿ ಇದನ್ನು ನೋಡಿದಾಗ, ಇದರಲ್ಲಿ ವರ್ಣಿತವಾಗಿರುವ ಅನುಭವಗಳು ಒಟ್ಟಾರೆಯಾಗಿ ಬೇಂದ್ರೆಯವರ ಕಾವ್ಯದಲ್ಲಿ ನಿರ್ದಿಷ್ಟ ತಾತ್ವಿಕ ನಿಲುವಿನ ಸಂಕೇತಗಳು ಎಂಬುದನ್ನು ಗಮನಿಸಿದಾಗ. ವಾಸ್ತವಿಕ ಹಂತದಲ್ಲಿ ಇದು ಒಂದು ಬೆಳಗಿನ ಅನುಭವವಾದರೆ, ಅದರೊಳಗೆ ಇನ್ನೊಂದು ಹರಿವ ತಾತ್ವಿಕತೆಯ ಹಂತದಲ್ಲಿ ಮನುಕುಲಕ್ಕೆ ಸಂಭವಿಸಲಿರುವ ದಿವ್ಯವಿಕಾಸದ ವರ್ಣನೆ ಅದು. ಆ ಘಟ್ಟದಲ್ಲಿ ಎಲ್ಲ ಬೇಧಗಳು—ಅತ್ಯಂತ ಮೂಲಭೂತ ಹಂತಗಳಲ್ಲಿ ಕೂಡಾ ಮಾಯವಾಗುತ್ತವೆ. ಜಡ–ಚೈತನ್ಯ, ಜೀವ–ದೇವ, ಮುಂತಾದ ಎಲ್ಲ ಭೇದಗಳು ಮಾಯವಾಗುತ್ತವೆ. ಮನುಷ್ಯ ಮನಸ್ಸಿಗೆ ಸಾಧ್ಯವಾಗುವ ಅತ್ಯಂತ ಎತ್ತರದ ಕಲ್ಪನೆ ಇದು. (ಶಕ್ತಿ ಪು. 67)

ಎಂತಹ ಮಾತು : "ಆ ಘಟ್ಟದಲ್ಲಿ ಎಲ್ಲ ಬೇಧಗಳು—ಅತ್ಯಂತ ಮೂಲಭೂತ ಹಂತಗಳಲ್ಲಿ ಕೂಡಾ—ಮಾಯವಾಗುತ್ತವೆ". ಬೇಂದ್ರೆ "ಗುಂಗುಂ ಗಾನ", "ಮೋಡಿ" ಎಂಥಾ "ಮಾಯ" ಮಾಡಿಬಿಟ್ಟವೆ-"ಮೂಲಭೂತ ಹಂತ"ದ "ಬೇಧಗಳು" ಎಷ್ಟು ದಿಢೀರನೆ "ಮಾಯ"ವಾಗುತ್ತವೆ ಬೇಂದ್ರೆಯಲ್ಲಿ ! "ಜಡ–ಚೈತನ್ಯ, ಜೀವ–ದೇವ ಮುಂತಾದ ಎಲ್ಲಾ ಬೇಧಗಳು" ಮತ್ತೊಮ್ಮೆ, ನಾಗರಾಜರ ಮಾತಿನಲ್ಲಿ "ಮಾಯ" ವಾಗುತ್ತವೆ. ಈ "ಮಾಯ" ಪದದಲ್ಲಿ ಅತ್ಯಾವಶ್ಯಕವಾಗಿ ಇರಲೇಬೇಕಾದ ವ್ಯಂಗ್ಯ" ಇರದಿ, ಅಂದರೆ ವಿಮರ್ಶಕನ ಎಚ್ಚರ ಶುದ್ಧಾಂಗವಾಗಿ ನಾಗರಾಜರಲ್ಲಿದ್ದು ಅತ್ಯಂತ ಶೋಚನೀಯವಾದ ಸಂಗತಿ. ಸಾಲದ್ದಕ್ಕೆ, ನಾಗರಾಜರ ಈ ಭರತ ವಾಕ್ಯ ನೋಡಿ— "ಮನುಷ್ಯನ ಮನಸ್ಸಿಗೆ ಸಾಧ್ಯವಾಗುವ ಅತ್ಯಂತ ಎತ್ತರದ ಕಲ್ಪನೆ ಇದು ...ನೊದಲೇ ಹೇಳಿದ ಹಾಗೆ ಜಡ ಮತ್ತು ಚೈತನ್ಯದ ವಿರೋಧ "ಮಾಯ" (ನಾಗರಾಜರು ಮೂರನೇ ಬಾರಿ ಉಪಯೋಗಿಸುವ ಮಾತಿದು) ಕಾಡಿನ ನಾಡು ಗಂಧರ್ವರ ಸೀಮೆಯಾಗಿ ಪರಿವರ್ತನೆಯಾಗಿದೆ ; "ಭೂಮಿಯ ವಿಕಾಸದ ಮನುಕುಲದ ಅಂತಿಮ ಗಂತವ್ಯವೇ ಈ ಬಗೆಯ ಆನಂದ 'ಬೆಳಗು'ವಿನ ಕೊನೆಯ ಸಾಲುಗಳಲ್ಲಿ ಆ ಆನಂದದ

ಅವಳಿಯಾದ ಶಾಂತಿರಸದ ಉಗವುವನ್ನು ಕಾಣಬಹುದು...." ಓಂ ಶಾಂತಿಃ ಶಾಂತಿಃ ಶಾಂತಿಃ ! ! ! (ಪು. 67).

ಇಲ್ಲಿ ಅತ್ಯಂತ ವಿಸ್ಮಯಾತ್ಮಕವಾದ ಪ್ರಸಂಗವೆಂದರೆ, ಅನಂತಮೂರ್ತಿಯವರು ಸೂಚಿಸಿದಂತೆ "ಸೂಕ್ಷ್ಮವಾದ ವೈಜ್ಞಾನಿಕ ಮಾರ್ಕ್ಸ್‌ವಾದೀ ಓದುಗ" (ಪು. iv) ರೆನ್ನಬಹುದಾದ, ನಾಗರಾಜರು ಸೃಷ್ಟಿಯ "ಅತ್ಯಂತ ಮೂಲಭೂತ"-ನಾಗರಾಜರ ಮಾತಿದು-"ಬೇಧ"ಗಳು, ಅಂದರೆ ಜಡ-ಚೈತನ್ಯ, ಜೀವ-ದೇವ"ಗಳೆಂಬ ಶಾಶ್ವತ ದ್ವಂದ್ವಗಳು ಅಥವಾ ಜೈವಿಕ ವೈರಾಧ್ಯಗಳು "ಮಾಯ" ವಾಗಬಲ್ಲವಾದರೂ ಹೇಗೆ, ಒಂದು ವೇಳೆ ಅವು "ಮಾಯು"ವಾದದ್ದೇ ಆದರೆ ಅದು "ಮಾಯೆ" "ನೋಡಿ" "ಇಂದ್ರ ಜಾಲ" "ಗಾನದ ಗುಂಗುಂ" ಅಲ್ಲದೆ, ಜವಾಬ್ದಾರಿಯಿರುವ ಯಾವ ವಿಮರ್ಶಕನಾದರೂ ಅದನ್ನು ನಾಗರಾಜರೇ ಹೇಳುವ "ಅನುಭವ"ದ "ಕಾವ್ಯ" ಎನ್ನಲಾದೀತೇ, ಎನ್ನುವುದು.

ಉದಾಹರಣೆಗೆ, ಈ ದ್ವಂದ್ವ, ವೈರುಧ್ಯಗಳನ್ನೇ ಕುರಿತು ಬೆರಗುಗೊಂಡು ವಿಸ್ಮಯದ ವಿಷಾದದಲ್ಲಿ ನಿಂತ ಬ್ಲೇಕ್ ನಂತಹ ಮಹಾ ಅನುಭಾವಿ ಕವಿ ತನ್ನ ಜಗದ್ವಿಖ್ಯಾತವಾದ "ಟೈಗರ್" ಪದ್ಯದ ಕೊನೆಯಲ್ಲಿ- "Did the God who made the lamb make thee", ಅಂದರೆ, "ಕುರಿಮರಿಯನ್ನ ಮಾಡಿದ ದೇವರೇ ನಿನ್ನನ್ನೂ (ಹುಲಿಯನ್ನೂ) ಮಾಡಿದನೇ ?" ಎಂದು ಪ್ರಶ್ನಿಸುತ್ತಾನೆ. ಆದರೆ ಬೇಂದ್ರೆ ಕವನದ "ಗಾನದ ಗುಂ ಗುಂ" ನಲ್ಲಿ ಈ ಶಂಕೆ, ವಿಸ್ಮಯ, ಅನುಮಾನಗಳು-"ಸಂತಯಾತ್ಮಾ ವಿನಶ್ಯತಿ"-ಯಲ್ಲವೇ ನಮ್ಮ ಪರಂಪರೆಯಲ್ಲಿ ?--ದಿಢೀರನೆ "ಮಾಯ"ವಾಗಿಬಿಡುತ್ತವೆ, ನಾಗರಾಜರಿಗೆ ! ನಾಗರಾಜರಿಗೆ "ಇದು ಬರಿ ಬೆಳಗಲ್ಲೋ ಅಣ್ಣಾ" ಎನ್ನುವ ಅನುಮಾನವಿಲ್ಲದ ಸ್ಟೇಟ್‌ಮೆಂಟ್, ಜಾಹೀರಾತು, ಅಷ್ಟಕ್ಕೇ ದಿವ್ಯದರ್ಶನವಾಗಿದೆ. ಅವರಿಗೆ ಕೀಟ್ಸ್‌ನ "Beauty is truth, truth beauty" ಯ ಸಾಲು, ಬ್ಲೇಕಿನ "Did the God who made the lamb, make thee ?" ಸಾಲಿನ ಸೃಷ್ಟಿ ವಿಸ್ಮಯಕ್ಕೆ ತಿರುಗಿಸಿವೆ, ಆ ಮಹಾಕವನಕ್ಕೆ Ode on a Grecian Urn ಗೆ, ಒಂದು ರೀತಿಯ ಊಸವೇ ಎನ್ನುವುದು ತಿಳಿಯಬೇಕಾಗಿದೆ.

ವಿಮರ್ಶೆ ಇಂತಹ ಪರಿಭಾಷೆಗಳನ್ನು, ಅಂದರೆ "ಮಾಯ"-ನೂರು ಬಾರಿ ಉಪಯೋಗಿಸಿದ್ದಾರೆ ನಾಗರಾಜ್ ಈ "ಮಾಯ" ಪದವನ್ನು ಕ್ರಮವಾಗಿ ಬರುವ ನಾಲ್ಕು ವಾಕ್ಯಗಳಲ್ಲಿ !--"ದಿವ್ಯ ವಿಕಾಸ", "ಮನುಕುಲದ ಅಂತಿಮ ಗಂತವ್ಯ", "ಅದ್ವೈತದ

ಅತ್ಯುಚ್ಚದರ್ಶನ" ಎನ್ನುವ ಅರ್ಥಹೀನ, ಅನುಭವಶೂನ್ಯ ಅಬ್‌ಸ್ಟ್ರಾಕ್ಷನ್ (abs-traction) ಗಳನ್ನು ಉಪಯೋಗಿಸಿದಾಗ ಅದು ವಿಮರ್ಶೆಯಾಗುವುದಿಲ್ಲ-ಹರಿಕಥಾ ಕಾಲಕ್ಷೇಪವಾಗುತ್ತದೆ, ಓದುಗರನ್ನು ವಂಚಿಸುವ ಅಗ್ಗದ ತಂತ್ರವಾಗುತ್ತದೆ.

ಹೌದು, ಈ "ದಿವ್ಯ ವಿಕಾಸ", "ಮನುಕುಲದ ಅಂತಿಮ ಗಂತವ್ಯ", "ಅದ್ವೈತದ ಅತ್ಯುಚ್ಚ ದರ್ಶನ" ವೆನ್ನುವ ಬೂಸಾ ಪದಗಳು ವಿಮರ್ಶೆಯ ಅವಸರದಿಂದ ಬಂದ ಪದಗಳಾಗದೆ ಕೇವಲ ಅ-ಸಾಹಿತ್ಯಕ ಒತ್ತಡದಿಂದ ಬಂದುವಾದ್ದರಿಂದ, ವಿಮರ್ಶಕನ ಈ ಕೃತ್ಯ ಅಕ್ಷಮ್ಯವಾದ ಅಪರಾಧ, ವಂಚನೆಯಾಗುತ್ತದೆ. ಆದಕ್ಕೆಂದೇ ಈ "ಭವ್ಯ" ವಿಮರ್ಶೆಯ ಪರಿಭಾಷೆ "ಮಾಯು", "ದಿವ್ಯ" ವೆನ್ನುವಂಥಾ ಪದಗಳನ್ನು ಮರೆ ಹೊಕ್ಕೇ ತಲೆಮರೆಸಿಕೊಳ್ಳಬೇಕಾಗುತ್ತದೆ.

"ಶಕ್ತಿ-ಶಾರದೆಯ ಮೇಳ" ಕ್ಷೇಮವಾದ ಪುಸ್ತಕ : ಇದು ದ.ರಾ. ಬೇಂದ್ರೆಯಿಂದ ಹಿಡಿದು ಎಚ್. ಎಂ. ಚನ್ನಯ್ಯನವರವರೆಗೆ ಸಾರೋದ್ಧಾರವಾಗಿ ಎಲ್ಲರ ಬೆನ್ನನ್ನೂ ಕರೆದು, ಅಂದರಿಕಿ ಮಂಚಿವಾಡು ಅನಂಯ್ಯನೆನಿಸಿಕೊಳ್ಳುವ ಪುಸ್ತಕ. ಉದಾಹರಣೆಗೆ, ನಮ್ಮಾ ವಿಮರ್ಶೆಯ ವಾಸ್ತವದಲ್ಲಿ, ಬೇಂದ್ರೆ ಕಾವ್ಯವನ್ನು ಹೊಗಳುವವರು ಕುವೆಂಪು ಕಾವ್ಯವನ್ನು ತೆಗಳಲೇಬೇಕಾಗುತ್ತದೆ. ಅಂದಹಾಗೆ, ಯು.ಆರ್. ಅನಂತಮೂರ್ತಿ ಯವರು ನಾಗರಾಜರ ವಿಮರ್ಶೆಯ ಬಗ್ಗೆ "ಅನುಮಾನ"ಪಟ್ಟಿರುವುದು ಅತಿರೇಕದ ಪ್ರಶಂಸೆಗಳುಳ್ಳ ಬೇಂದ್ರೆಯವರ "ಬೆಳಗು" ಅನ್ನು ಕುರಿತಲ್ಲ, ಕುವೆಂಪು ಅವರ "ಹೂವು-ದೇವರು" ಅನ್ನು ಕುರಿತು. ಆದರೆ ಡಿ.ಆರ್. ನಾಗರಾಜರು ಇತ್ತಂಡಕ್ಕೂ ಒಪ್ಪುವಂತೆ ಇತ್ತ ಕುವೆಂಪು ಅವರಿಗೂ ಅತ್ತ ಬೇಂದ್ರೆಯವರಿಗೂ ಯಥಾವತ್ತಾಗಿ ಚಾಮರ ಬೀಸಿರುವುದರಿಂದ, ಅವರು ಪಟ್ಟಮಾಡಿದ ಒಂದು ಡಜನ್ನಿನ ಕವಿಗಳಿಗೆ ಯಾರಿಗೂ ನಿಷ್ಠುರದ ಮಾತನ್ನಾಡದಿರುವುದರಿಂದ ಇವರ "ಶಕ್ತಿ-ಶಾರದೆಯ ಮೇಳ" ಜನಾನುರಾಗಿಯಾಗಲಿಕ್ಕೆ ಸಾಕು.

ಕೊನೆಯದಾಗಿ ನಾಗರಾಜರ ಕೆಲವು ಜನರಲೈಜೇಷನ್‌ಗಳ, ತಾತ್ವಿಕ ನೆಲೆಗಳ ಬಗ್ಗೆ ಒಂದೆರಡು "ಅನುಮಾನ"ಗಳನ್ನು ಹೇಳಲೇಬೇಕಾಗಿದೆ. ಅವರೇನು "ಭೂಮಿ"ಯ ಬಗ್ಗೆ ಋಗ್ವೇದದಲ್ಲಿರುವುದನ್ನು ಎತ್ತಿಹಿಡಿದಿದ್ದಾರೋ ಅದು ನಾವು ಈಗ ಅದನ್ನು ಸಾಮಾನ್ಯವಾಗಿ ನೆಲದ ತತ್ವ, "ನೆಲದ ಬದುಕು" ಮಣ್ಣಿನ ಜೀವ, ಮಣ್ಣಿನ ವಾಸನೆ ಇತ್ಯಾದಿಯಾಗಿ ಗ್ರಹಿಸುತ್ತಿರುವ ಅರ್ಥದಲ್ಲಿ ಗ್ರಹಿತವಾಗಿಲ್ಲ. ಋಗ್ವೇದದ "ಭೂಮಿ", ನೆಲವಲ್ಲ, "ನೆಲದಬದುಕ"ಲ್ಲ-ಅದರಲ್ಲಿ ಉಳಿಮೆ ಇಲ್ಲ, ಗೆಯ್ಮೆ ಇಲ್ಲ : ಅದು ಯಜ್ಞ ಯಾಗಾದಿಗಳ ಯಜ್ಞಭೂಮಿ, ವೈದಿಕರ ವೇದಿಕೆ-platform, ಅಷ್ಟೆ.

ನಾಗರಾಜರು ಬೆಳಕು ಬೆಂಕಿಗಳ ಬಗ್ಗೆ ಮಾತನಾಡುತ್ತ "ಆರ್ಯರು ಮೂಲತಃ ಬೆಳಕಿನ ಆರಾಧಕರು" (ಪು. 347) ಅನ್ನುತ್ತಾರೆ. ವೇದೋಪನಿಷತ್ತುಗಳಲ್ಲಿ ಅತ್ಯಂತ ಅತಿರೇಕದ ಸಂಖ್ಯೆಯಲ್ಲಿ ಬರುವ ಒಂದು ಪದ–ಅಗ್ನಿ, ಬೆಂಕಿ–ಹವಿಸ್ಸು ಇತ್ಯಾದಿಗಳನ್ನು ಸ್ವಾಹ ಮಾಡುವ, ಸುಡುವ ಸೃಷ್ಟಿಸುವ ಶಕ್ತಿ. ಅದಕ್ಕೇ ಅಗ್ನಿ ಹುಟ್ಟು ಮತ್ತು ಸಾವಿನ ಮಾಧ್ಯಮ. ಬೆಂಕಿಯಿಲ್ಲದೆ ಆರ್ಯ ಸಂಸ್ಕೃತಿ ಇಲ್ಲವೇ ಇಲ್ಲ. ಹುಟ್ಟು, ಮದುವೆ, ಸಾವು ಇವೆಲ್ಲವುಗಳ ಸಂಸ್ಕಾರ ಅಗ್ನಿಯೇ, ಬೆಂಕಿಯೇ–ಬೆಳಕಲ್ಲ. ಆಮೇಲೆ ನಾಗರಾಜರು ಕಂಬಾರರ ಬಗ್ಗೆ ಮಾತನಾಡುತ್ತ, ಈ ಜನರಲೈಜೇಷನ್ (generalisation) ಮಾಡುತ್ತಾರೆ : "ಅತ್ಯಂತ ಆಪ್ತವಾದ ರೀತಿಯಲ್ಲಿ, ತೀವ್ರ ರೀತಿಯಲ್ಲಿ ಜಗತ್ತನ್ನು ಗ್ರಹಿಸಲು ಸಾಧ್ಯವಿರುವುದು ಕಾಮದ ಮೂಲಕವೇ". ಈ ಖಡಾಖಂಡಿತವಾದ ಮಾತು ಪ್ರೇಮ (love)ದ ಬಗ್ಗೆ ಆಡಿದ್ದರೂ, ಒಪ್ಪುವುದು ಸ್ವಲ್ಪ ಕಷ್ಟವೇ : ಆದರೆ ಇದನ್ನ ಕಾಮ(sex)ದ ಬಗ್ಗೆ ಆಡಿರುವುದು ಹಾಸ್ಯಾಸ್ಪದವೇ. (ಅಂದಹಾಗೆ ಒಂದು ಚಿಕ್ಕ ತಿದ್ದುಪಡಿ, ಶರ್ಮರ ಕಾಮದ ಪದ್ಯ ಕುರಿತ ಒಂದು ಮಾತಿನ ಬಗ್ಗೆ– 'ಬ್ಲೋಅಪ್' ಕೆಲಸ (ಪು 335) ಬ್ಲೋಜಾಬ್ (blowjob) ಕೆಲಸವಾಗಬೇಕು)

ಕಂಬಾರರ 'ಕಾಮ' ಕವನಗಳ ಬಗ್ಗೆ ಮಾತನಾಡುತ್ತಿರುವ ಈ ಸಂದರ್ಭದಲ್ಲಿ, ಖಂಡಿತವಾಗಿ ನಾಗರಾಜರ ಅತ್ಯಂತ ಒಳನೋಟದ ಸ್ವೋಪಜ್ಞ ವಿಮರ್ಶೆಯಿಂದ "ಅಮೃತ ಮತ್ತು ಗರುಡ"ದಲ್ಲಿನ ಕಂಬಾರರ "ನೆರಳಿನ ಜೋಡಿ"ಯ ಪ್ರಾಕ್ಟಿಕಲ್ ಕ್ರಿಟಿಸಿಸಂ ನೆನೆಯಲೇಬೇಕಾದ್ದು. ಇಂತಹ ಜವಾಬ್ದಾರಿಯಾದ ಓದಿನ ಸಾಕ್ಷ್ಯದಲ್ಲೇ ನಿಲ್ಲಬೇಕಾದ ಪ್ರಾಕ್ಟಿಕಲ್ ವಿಮರ್ಶೆಯ ಧೀಮಂತತೆ, ದಿಟ್ಟತನ, ಒಳನೋಟ ನಾಗರಾಜರಲ್ಲಿ ಅನುಮಾನವಿಲ್ಲದೆ ಇದೆ. ಆದರೆ ಇಂತಹ ತೋಡಿದ ಬಾವಿಗೆ ಜಲವನ್ನು ಸಾಕ್ಷಿಯಾಗಿ ನೀಡಬಲ್ಲ ಪ್ರಾಕ್ಟಿಕಲ್ ವಿಮರ್ಶೆ ಈ "ಶಕ್ತಿ ಶಾರದೆ"ಯಲ್ಲಿದ್ದಿದ್ದರೆ ಅದೊಂದು ವಿಮರ್ಶೆಯ ಮೈಲಿಗಲ್ಲಾಗುತ್ತಿತ್ತು. ಆದರೆ ನಾಗರಾಜರ ಈ ಧಾಳಾಗಿನ, ಸಿಂಹಾವಲೋಕನದ ರೀತಿಯ, ವಿಹಂಗಮ ದೃಷ್ಟಿಯ ಆರಾಮಿನ ಈ ಸರ್ವೆ (survey) ಇವರಿಗೆ ಸ್ವಸ್ತಿ–ಕ್ಷೇಮಗಳನ್ನ ತಂದಿದೆಯಾಗಲಿ, ಇವರ ದಿಟ್ಟ ಸ್ವೋಪಜ್ಞ ಒಳನೋಟಗಳನ್ನ ಹೊರಚೆಲ್ಲುವ ಪ್ರಾಕ್ಟಿಕಲ್ ವಿಮರ್ಶೆಯಾಗಿ ಇವರಿಗೆ ನಿಷ್ಠುರತೆಯ ತಾಪತ್ರಯ ತಂದಿಲ್ಲ. ಆದರೆ ಆಯ್ಕೆಯ ಸ್ವಾತಂತ್ರ್ಯ ನಾಗರಾಜರದ್ದೇ : ಹೀಗಾಗಿ ಅವರ ಅಮೃತ ಎದ್ದು ನಿಲ್ಲುತ್ತದೆ, "ಶಕ್ತಿ–ಶಾರದೆ" ಕಷ್ಟದಿಂದಲೇ ನಿಂತುಕೊಳ್ಳಬೇಕಾಗುತ್ತದೆ, "ಅಮೃತ"ಕ್ಕೆ ಆತುಕೊಂಡು !

(ಶಕ್ತಿ–ಶಾರದೆಯ ಮೇಳ : ಡಾ|| ಡಿ.ಆರ್. ನಾಗರಾಜ್, ಅಕ್ಷರ ಪ್ರಕಾಶನ, ಸಾಗರ, ಬೆಲೆ ರೂ. 60)

# ತೇಜಸ್ವಿ ಸಾಹಿತ್ಯ ಮತ್ತು ಸಾಮಾಜಿಕ ಪ್ರಜ್ಞೆ

—ವೇಣುಗೋಪಾಲ ಸೊರಬ

ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರ ಬರಹ ತೆರೆದಿಡುವ ಸಮಾಜ. ನಾವಿಲ್ಲಿ ನೋಡುವುದಷ್ಟೇ ಅಲ್ಲ, ಜೊತೆಜೊತೆಗೇ ಸಮಕಾಲೀನ ಸಮಾಜದ ವಿಶ್ವರೂಪವನ್ನೂ ನೋಡಿ ಅನುಭವಿಸುತ್ತೇವೆ. ಸ್ವಾತಂತ್ರ್ಯೋತ್ತರ ಭಾರತದ ಜೀವಂತ ಚಿತ್ರಣ ನಮಗೆ ಇವರ ಬರಹದಲ್ಲಿ ಕಂಡುಬರುತ್ತದೆ, ಅತ್ಯಂತ ನಾಗರಿಕ ಸಂವೇದನೆಯ ವ್ಯಕ್ತಿಗಳಿಂದ ಹಿಡಿದು ಅಷ್ಟೇ ರೂಕ್ಷ ನಡವಳಿಕೆಯ ಪಶುಸಮಾನ ಮಾನವ ಪ್ರಾಣಿಗಳವರೆಗೆ ಎಲ್ಲ ಬಗೆಯ ಮನುಷ್ಯರನ್ನೂ ನಾವು ಇಲ್ಲಿ ಕಾಣುತ್ತೇವೆ.

ತೇಜಸ್ವಿಯವರು, ನವ್ಯಸಾಹಿತ್ಯದ ಉತ್ಕರ್ಷದ ಸಮಯದಲ್ಲಿ, ತಮ್ಮ ಬರವಣಿಗೆ ಯನ್ನು ಪ್ರಾರಂಭಿಸಿ, ಅದರಿಂದ ವಿಭಿನ್ನವಾಗಿ ಬರೆಯತೊಡಗಿದ್ದರಿಂದ, ಅವರ ಬರಹ ದಲ್ಲಿ, ಅಂತರಂಗಿಕ ಸಂಶೋಧನೆಗಿಂತ ಹೆಚ್ಚಾಗಿ, ಬಾಹ್ಯಗೋಚರ ಚಟುವಟಿಕೆಗಳೇ ಪ್ರಾಧಾನ್ಯ ಪಡೆಯುತ್ತವೆ, ಇದರ ಪರಿಣಾಮವಾಗಿ, ಮನುಷ್ಯ–ಮನುಷ್ಯ ಸಂಬಂಧದ ಮೇಲು ನೋಟದ ಪದರಗಳಲ್ಲಿನ ವೈಪರೀತ್ಯಗಳು ಮುಖ್ಯ ಕಾಳಜಿಯಾಗಿ ಈ ಬರಹದಲ್ಲಿ ಕಾಣಿಸಿಕೊಳ್ಳುತ್ತವೆ. ಅಂದರೆ, ಮಾನವ ತನ್ನ ಸಾಮಾಜಿಕ ಪರಿಸರ ದಲ್ಲಿ ನಡೆದುಕೊಳ್ಳುವ ರೀತಿ, ಇಡೀ ಸಾಮಾಜಿಕ ಚೌಕಟ್ಟಿನ ಬಾಂದುಕಲ್ಲು ಗಳಾಗುತ್ತವೆ.

ತೇಜಸ್ವಿಯವರ ಬರಹದ ಮೂರು ಮುಖ್ಯಘಟ್ಟಗಳನ್ನು ಹೀಗೆ ಗುರ್ತಿಸಬಹುದು—
(1) ಸಣ್ಣಕಥೆಗಳು, (2) 'ಸ್ವರೂಪ' ಮತ್ತು 'ನಿಗೂಢ ಮನುಷ್ಯರು', ಹಾಗೂ
(2) 'ಕರ್ವಾಲೊ' ಮತ್ತು 'ಚಿದಂಬರ ರಹಸ್ಯ',

(1) ಸಣ್ಣ ಕಥೆಗಳು : ಇವುಗಳಲ್ಲಿ 'ಸ್ವರೂಪ'ದ ಮೊದಲು ಬರೆದವು ಮತ್ತು ಅನಂತರ ಬರೆದವು ಎಂದು ಎರಡು ಭಾಗ ಮಾಡಬಹುದು. ಈ ಮೊದಲ ಕಥೆಗಳಲ್ಲಿ 'ಲಿಂಗಬಂದ' ಮುಗ್ಧ ಮನಸ್ಸನ್ನು ಅನಾವರಣಗೊಳಿಸುವ ಕ್ರಮವಾಗಿದೆ. ಈ ಕಥೆ ಯಲ್ಲಿನ ಸಾಂಕೇತಿಕತೆಗೂ, 'ಹುಲಿಯೂರಿನ ಸರಹದ್ದು' ಕಥೆಯಲ್ಲಿನ ಸಾಂಕೇತಿಕತೆಗೂ ಕಂಡುಬರುವ ವ್ಯತ್ಯಾಸವನ್ನು ನಾವು ಅಭ್ಯಾಸಮಾಡಿದರೆ, ತೇಜಸ್ವಿ, ಹೇಗೆ ಹೆಚ್ಚು ಹೆಚ್ಚು ಸಾಮಾಜಿಕ ಸಂಬದ್ಧತೆಯ ಕಡೆಗೆ ಹೊರಳುತ್ತಾರೆ ಎನ್ನುವುದು ತಿಳಿಯುತ್ತದ.

‘ಲಿಂಗಬಂದ’ ಕಥೆಯಲ್ಲಿನ ಸಾಂಕೇತಿಕತೆ ವಿಶ್ವವ್ಯಾಪಿಯಾದದ್ದು. ಜಾನಪದೀಯವಾದ ಇಲ್ಲಿನ ಪ್ರತಿಮೆಗಳಿಗೂ, ಬುದ್ಧಿಪೂರ್ವಕವಾಗಿ ಬಳಸಲ್ಪಟ್ಟಿರುವ ‘ಹುಲಿಯೂರಿನ ಸರಹದ್ದು’ ಕಥೆಯ ಗರುಡನ ಪ್ರತಿಮೆಗೂ ಅಜಗಜಾಂತರ ವ್ಯತ್ಯಾಸ ಕಾಣುಬರುತ್ತದೆ. ಸಾಮಾಜಿಕವಾದ ಒತ್ತಡಗಳಿಂದಾಗಿ, ಜಾತಿ ಪ್ರಜ್ಞೆಯನ್ನ ಮೀರಬೇಕು ಎಂಬ ತವಕ ‘ಹುಲಿಯೂರಿನ ಸರಹದ್ದು’ ಕಥೆಯಲ್ಲಿನ ಪ್ರತಿಮೆಗಳು ಕೇವಲ ಪ್ರತೀಕಗಳಾಗಿ ಬಿಡುತ್ತವೆ.

ಎರಡನೆಯ ಭಾಗದ ಕಥೆಗಳಲ್ಲಿ ‘ಅವನತಿ’ ಕಥೆ, ಕಥೆಗಾರನಿಗೆ ಸಮಾಜದ ಹಲವು ಮಗ್ಗಲುಗಳ ಬಗೆಗೆ ಇರುವ ಕುತೂಹಲವನ್ನು ತೆರೆದುತೋರಿಸುತ್ತದೆ. ಕುರುಡು ನಂಬಿಕೆಗಳ ಆಗರವಾಗಿರುವ, ಗ್ರಾಮೀಣ ಜನಗಳ ಜೀವನ ಮತ್ತು ಅವರ ಸೀಮಿತ ಆಸೆ ಆಕಾಂಕ್ಷೆಗಳನ್ನು ಕಥೆ ಅತ್ಯಂತ ದಕ್ಷವಾಗಿ ಬಿಂಬಿಸುತ್ತದೆ. ಕಥೆಯ ಹೆಸರೇ ಅವನತಿಯನ್ನು ಸೂಚಿಸುತ್ತದೆ. ಉತ್ತಮ ಶಿಲ್ಪಿಯಾಗಬಹುದಾಗಿದ್ದ ಸೂರಾಚಾರಿಯ ಅವನತಿ, ಇಲ್ಲಿನ ಒಂದು ಮುಖವಾದರೆ, ಮಕ್ಕಳ ಯೋಗ ಇಲ್ಲದಿರುವ ಸುಬ್ಬಯ್ಯ ನವರು ಇನ್ನೊಂದು ಮುಖ. ಸುಬ್ಬಯ್ಯನ ಹೆಂಡತಿಗೆ ಮಕ್ಕಳು ಉಳಿಯದೆ ಇದ್ದು ದಕ್ಕೆ ಅವಳ ‘ಮಲೆ’ಯಲ್ಲಿನ ದೋಷ ಎನ್ನುವುದು, ಇಡೀ ಕಥೆಯಲ್ಲಿನ ವಿಕೃತಗೊಂಡ ವೈಚಿತ್ರ್ಯಗಳನ್ನು ಎತ್ತಿ ತೋರಿಸುತ್ತದೆ. ರೋಗಗ್ರಸ್ತ ಸಮಾಜದ ಇಂತಹ ಬೆಳವಣಿಗೆ ಗಳನ್ನು ‘ಅವನತಿ’ ಕಥೆ ಅತ್ಯಂತ ಪ್ರಭಾವಕಾರಿಯಾಗಿ ಚಿತ್ರಿಸಿದೆ. ಇಲ್ಲಿ ಗಮನಿಸ ಬೇಕಾದ ಒಂದು ಮುಖ್ಯ ಅಂಶವೆಂದರೆ, ಕಥೆಗಾರ ಇಲ್ಲಿ ಯಾವುದೇ ಬಗೆಯ ಸಾಂಕೇತಿ ಕತೆ ಅಥವಾ ಪ್ರತಿಮೆಗಳಿಗೆ ಹಾತೊರೆಯದೆ, ಕಥೆಯನ್ನು ನೇರವಾಗಿ, ಜನಪದೀಯ ನಿಟ್ಟಿನಲ್ಲಿ ಹೇಳುತ್ತಾ ಹೋಗುವ ರೀತಿ.

ಇದೇ ಗುಂಪಿನ ಇನ್ನೊಂದು ಮುಖ್ಯ ಕಥೆ – ‘ಕುಬಿ ಮತ್ತು ಇಯಾಲ’ ಒಂದು ರೋಗಗ್ರಸ್ತ ಸಮಾಜದ ವಿಕೃತ ಸೃಷ್ಟಿಯಾದ ಇಲ್ಲಿನ ಲೋರಿ, ಸೊಸೈಟಿ ಡೈರೆಕ್ಟರ್ ಶಿವಣ್ಣ, ಪೋಲೀಸ್ ಇನ್ಸ್‌ಪೆಕ್ಟರ್ ಅನ್ವರ್, ಹಮಾಲಿಗಳು, ಇಯಾಲಳ ತಂದೆ ಓಬ್ರಿನ್, ಕಾಂಪೌಂಡರ್ ರಾಮರಾಯ, ಅರವರ ನೇಸ – ಹೀಗೆ ಹಲವು ಪಾತ್ರಗಳು ಯಾವುದೇ ಒಂದು ದಾರಿ ಕಂಡುಕೊಳ್ಳದೆ ಬಳಲುವುದನ್ನು ನೋಡುತ್ತೇವೆ. ಜೀವನದ ಅರ್ಥವಂತಿಕೆಯನ್ನೇ ಹಿಡಿತಕ್ಕೆ ತಂದುಕೊಳ್ಳಲು ಸಾಧ್ಯವಾಗದೆ ತೊಳಲುವ ಇವರ ಮಧ್ಯೆ, ಹೂವಿನಂತಹ ಮೃದು ಮನಸ್ಸಿನ ಇಯಾಲ ಕೊಲೆಗೆ ಒಳಗಾಗುವುದು ಇಡೀ ಸಮಾಜದ ಅನೈತಿಕತೆಗೆ, ಅನಾಚಾರಕ್ಕೆ ಪ್ರತೀಕವಾಗುತ್ತದೆ. ಇಂತಹ ದುರಂತದ ಮಧ್ಯೆಯೂ, ಜೀವನಕ್ಕೆ ಒಂದು ಅರ್ಥವಂತಿಕೆಯನ್ನು ತಂದುಕೊಡಲು ಪ್ರಯತ್ನಿಸುವ ಕುಬೇರ ಡಾಕ್ಟರನ ಹತಾಶೆ, ಒಳನೋವುಗಳು ಅರ್ಥಪೂರ್ಣವಾಗುತ್ತವೆ.

ಈ ಪಾತ್ರವನ್ನೂ, ಸಹ ತೇಜಸ್ವಿ, ಕೇವಲ ಹೊರನೋಟಗಳಿಂದ ಸಿದ್ಧಪಡಿಸಿದ ಹಾಗೆ ಕಂಡರೂ, ಸದಾ ಒಂದು ಆದರ್ಶ ಸಮಾಜದ ಕನಸು ಕಾಣುವ, ತನ್ನ ಸುತ್ತಲಿನ ಅನಾಯಕ ಜನಗಳ ನೋವಿನಲ್ಲಿ ಪಾಲ್ಗೊಳ್ಳುವ ಈತನ ಪಾತ್ರ ಹೃದಯಸ್ಪರ್ಶಿಯಾಗಿದೆ.

ಇದೇ ಗುಂಪಿನ ಇನ್ನೆರಡು ಮುಖ್ಯಕಥೆಗಳೆಂದರೆ, 'ಅಬಚೂರಿನ ಪೋಸ್ಟಾಫೀಸು' ಮತ್ತು 'ತಬರನ ಕಥೆ'. 'ಅಬಚೂರಿನ ಪೋಸ್ಟಾಫೀಸ್' ಕಥೆಯಲ್ಲಿನ ಸಾಮಾಜಿಕ ಪ್ರಜ್ಞೆ ಬಹಳ ಮಟ್ಟಿಗೆ ಮೇಲ್ಪದರದಲ್ಲಿ ಕಂಡುಬರುವಂತಹದ್ದು. ಆದರೆ ಪೋಸ್ಟಾಫೀಸು ಬೋಬಣ್ಣನ ವೈಯಕ್ತಿಕ ಜೀವನದಲ್ಲಿ ಹೆಚ್ಚಿನ ತೊಳಲಾಟವನ್ನು ತಂದು ಹಾಕುತ್ತದೆ. ಆತನ ಅತ್ತೆ ಮತ್ತು ಹೆಂಡತಿ – ಇವರ ತಪ್ಪು ಕಲ್ಪನೆಗಳು ಸಮಸ್ಯೆಯನ್ನು ಜಟಿಲಗೊಳಿಸುತ್ತವೆ. ಆದರೆ ಪೋಸ್ಟಾಫೀಸಿನ ಆಗಮನದಿಂದ, ಇಡೀ ಪರಿಸರದಲ್ಲಿ ತಂದೊಡ್ಡುವ ಸಮಸ್ಯೆಗಳು, ಗಮನಾರ್ಹ. ಕುತೂಹಲವನ್ನಷ್ಟೇ ಅಲ್ಲದೆ, ಜನಗಳಲ್ಲಿ ಸಂಶಯವನ್ನೂ ಬಿತ್ತುವುದರಿಂದ ಬೋಬಣ್ಣನ ವೈಯಕ್ತಿಕ ದುರಂತವೇ ಮುಖ್ಯವಾಗಿ, ಕಥೆಯು ಸಾಮಾಜಿಕ ಆಯಾಮ ಸ್ವಲ್ಪಮಟ್ಟಿಗೆ ಪ್ರಾಧಾನ್ಯ ಕಳೆದುಕೊಳ್ಳುತ್ತದೆ. 'ತಬರನ ಕಥೆ'ಯಲ್ಲಿ ವ್ಯಕ್ತಿಯೊಬ್ಬನ ಪರಿಪಾಟಲು ಇಡೀ ಕಥೆಯನ್ನು ವ್ಯಾಪಿಸುತ್ತದೆ. ಅದರೆ ನವ್ಯಕಥೆಗಳಲ್ಲಿ ಉಂಟಾಗುವ ಹಾಗೆ, ಇಲ್ಲಿ ಕಥಾನಾಯಕ, ತನ್ನ ಸಂಕಟವನ್ನು ಇಡಿ ಇಡಿಯಾಗಿ ಅನುಭವಿಸುತ್ತ ಅದನ್ನೇ ಬಂಡವಾಳವನ್ನಾಗಿ ಮಾಡಿಕೊಳ್ಳುವುದಿಲ್ಲ. ಅವನ ಹತಾಶೆ ಅವನ ಮುಂದೆ ಒಂದು ನರಕವನ್ನೇ ಸೃಷ್ಟಿಸುತ್ತದೆ. ಉದಾ. ಗೆ "ತಬರನಿಗೆ ಒಂದು ಗುಮಾನಿ ಮೂಡಿತು. ತಾನು ಎಂದೋ ತೀರಿಕೊಂಡು ಪ್ರೇತ ಪ್ರಪಂಚವೊಂದರಲ್ಲಿ ವ್ಯವಹರಿಸುತ್ತಿದ್ದೇನೆ ಎಂದು" (ಪೂರ್ಣಚಂದ್ರ ತೇಜಸ್ವಿ ಅವರ ಎಲ್ಲ ಕಥೆಗಳು 1983, ಪುಟ 272)

ಬಹಳ ಮಟ್ಟಿಗೆ ಗೊಗೊಲ್‌ನ "ಓವರ್ ಕೋಟ್" ಕಥೆಯನ್ನು ನೆನಪಿಗೆ ತರುವ 'ತಬರನ ಕಥೆ' ಒಂದು ವ್ಯವಸ್ಥೆ ಎಷ್ಟರ ಮಟ್ಟಿಗೆ ತುಕ್ಕು ಹಿಡಿಯಬಲ್ಲದು, ತನ್ನ ಕ್ರೂರ ಮುಷ್ಟಿಯಲ್ಲಿ ವ್ಯಕ್ತಿಯೊಬ್ಬನ ಹಿತವನ್ನು ಬಲಿತಗೆದುಕೊಳ್ಳಬಹುದು ಎನ್ನುವುದನ್ನು ನಿರ್ವಿವಾದವಾಗಿ ಎತ್ತಿತೋರಿಸುತ್ತದೆ. ಆ ಕಾರಣಕ್ಕಾಗಿಯೇ ಈ ಕಥೆಯ ಸಾಮಾಜಿಕ ಪ್ರಸ್ತುತತೆ ಅರ್ಥಪೂರ್ಣವಾಗುತ್ತವೆ. ಆದರೂ ಇಂತಹ ಕಥೆಯಲ್ಲಿ ಲೇಖಕರು 'ಗುಣಾತ್ಮಕ ಸಾಧ್ಯತೆಗಳನ್ನು ಕಾಣಿಸದಿದ್ದ' ಬಗ್ಗೆ ಶ್ರೀ ಜಿ.ಎಚ್. ನಾಯಕರು ಎತ್ತಿರುವ ಅಕ್ಷೇಪವನ್ನು ಸಂಪೂರ್ಣವಾಗಿ ತಳ್ಳಿ ಹಾಕುವಂತಿಲ್ಲ.

(2) ಈಗ 'ಸ್ವರೂಪ' ಮತ್ತು 'ನಿಗೂಢ ಮನುಷ್ಯರು' ಕಿರು ಕಾದಂಬರಿಗಳತ್ತ ನಮ್ಮ ದೃಷ್ಟಿ ಹರಿಸಬಹುದು. ಈ ಎರಡೂ ಕಾದಂಬರಿಗಳೂ ತುಂಬಾ ವಿಭಿನ್ನ ಕೃತಿ

ಗಳು. ನವ್ಯಕತೆಯ ಚೌಕಟ್ಟಿನಲ್ಲೇ ತನ್ನ ಅಸ್ತಿತ್ವವನ್ನು ಪಡೆದುಕೊಳ್ಳುವ ಈ ಕಥೆಯ ಬೌದ್ಧಿಕ ನಿಲುವು, ತಾರ್ಕಿಕ ವಾಗ್ವಾದಗಳು, ಈ ಕಥೆಯನ್ನು ಬೇರೆ ಪಥಗಳಿಂದ ವಿಭಿನ್ನವಾದುದನ್ನಾಗಿ ಮಾಡುತ್ತವೆ. ಪ್ರತಿಯೊಂದನ್ನೂ ವ್ಯಕ್ತಿಗತ ದೃಷ್ಟಿಕೋನದಿಂದಲೇ ನೋಡುವ ಇಲ್ಲಿನ ಮಾತಿನ ಸರಣಿ ಕೂಡಾ ಅತ್ಯಾಶ್ಚರ್ಯಕರ ರೀತಿಯಲ್ಲಿ, ನವ್ಯದ ಧಾಟಿಯಲ್ಲೇ ಇದೆ : "ಉದ್ವೇಗ ಮಿಗಿಲಾದಂತೆ ಉನ್ಮಾದಗ್ರಸ್ತನಾಗಿ ಮತಿವಿಕಲನಾಗದಿರಲು ನಾನು ಬೌದ್ಧಿಕವಾಗಿ ನಡೆಸುವ ಪ್ರಯತ್ನವೂ ಮಿಗಿಲಾಯ್ತು, ಕೊನೆಕೊನೆಗೆ ಬುದ್ಧಿ ನಿಧಾನವಾಗಿ ಸೋಲುತ್ತಾ ಬರುತ್ತಿರುವಂತೆ ಕಂಡಿತು. ಯಾವ ಬಗೆಯ ಆತ್ಮಹತ್ಯೆ ಇದ್ದುದರಲ್ಲಿ ವಾಸಿಯಾದುದು ಎಂದೆಲ್ಲಾ ಯೋಚಿಸಿದನು. ಮೌನ ಏಕಾಂತಗಳು ಎಂದಿಗಿಂತ ಉಜ್ವಲವಾಗಿ ಸಾವಿನ ರಾಯಭಾರಿಗಳಾಗಿ ಕಂಡವು".

ನವ್ಯಸಾಹಿತ್ಯ ಸಂದರ್ಭದಲ್ಲಿ 'ಆತ್ಮರತಿ' ಎಂದು ಯಾವುದನ್ನು ಕರೆಯಲಾಗುತ್ತದೆಯೋ ಅಂತಹ ಭಾವನೆಗಳನ್ನು ಈ ಮೇಲಿನ ಮಾತುಗಳಲ್ಲಿ ಧಾರಾಳವಾಗಿ ನೋಡಬಹುದು. ಈ ನೀಳ್ಗತೆಯ ಮುಖ್ಯ ಕಾಳಜಿ ಸಾಮಾಜಿಕ ಅಸಮತೋಲನವನ್ನು ಎತ್ತಿ ತೋರಿಸುವುದೇ ಆಗಿದೆ. ಈ ಹಿನ್ನೆಲೆಯಲ್ಲಿ, ಶೋಷಣೆಗೆ ಸಂಬಂಧಿಸಿದಂತೆ ಕಥಾನಾಯಕ ಆಡುವ ಈ ಮಾತುಗಳನ್ನು ನೋಡಬೇಕು.

"ಶೋಷಣೆ ಕೇವಲ ಬಂಡವಾಳಗಾರನಿಗೆ ಸೀಮಿತವಲ್ಲ... ... ಇಂಬಳಗಳನ್ನು ನೋಡಿದ್ದೀಯಾ ! ಏಕೆ ಹೇಳಿದೆನೆಂದರೆ, ನಾನು ಹಳ್ಳಿಗರ ಕೈಲಿ ದುಡಿಸಿ ಶೋಷಿಸಿ ದೊಡ್ಡವನಾದೆನೆನ್ನುವುದು ಕಾಣುವ ವಿಷಯ. ಆದರೆ ದಿನಾ ಕೆಲಸ ಮಾಡಿದ್ದರೆ ಮೇಲೆ ನಾಲ್ಕಾಣೆ ಹೆಚ್ಚಿಗೆ ಕಿತ್ತು, ಸಾಲ ಮಾಡಿ ಸಂತೆಗೆ ಹೋಗಿ ಕಜ್ಜಿ ತುರಿಸುತ್ತಾ ಕಾಲ ಕಳೆದು ಗದ್ದೆಯನ್ನೆಲ್ಲಾ ಹಾಳುಮಾಡಿ ನಮ್ಮ ಚಿಕ್ಕಪ್ಪನನ್ನು ಶೋಷಿಸಿದ್ದು ಬೇರೆತರದ ಶೋಷಣೆ. ಸೋಷಲಿಸಂಗೆ ಸಿಕ್ಕುವುದು ದುಡಿಸಿ ಉತ್ಪಾದನೆ ಮಾಡಿದವನ ಶೋಷಣೆ. ಇನ್ನೊಂದು ಅನ್ಯತರದ್ದು ಅವರ ಹಿಡಿತಕ್ಕೆ ಸಿಗುವುದಿಲ್ಲ. ನನಗೆ ನಮ್ಮ ಗದ್ದೆಯ ಬಾಂದುಗಳನ್ನು ಪತ್ತೆ ಹಚ್ಚಬೇಕಾದರೆ ನೂರಾರು ರೂಪಾಯಿ ಖರ್ಚಾಯಿತು. ಶೋಷಣೆ ಒಂದಲ್ಲ ಒಂದು ರೀತಿಯಲ್ಲಿ ಅನಿವಾರ್ಯ. ಇಲ್ಲ ಉತ್ಪಾದಿಸಲು ಶೋಷಿಸ

ಇಲ್ಲ ಹಾಳುಮಾಡಲು ಶೋಷಿಸಬೇಕು."

ಸಾಮಾಜಿಕ ಚಿಂತನೆಯ ದೃಷ್ಟಿಯಿಂದ ಈ ಮೇಲಿನ ಮಾತುಗಳು ಬಹಳ ಗಂಭೀರವಾದವು. ಶೋಷಣೆಯ ಅನಿವಾರ್ಯತೆಯನ್ನು ಖಡಾಖಂಡಿತವಾಗಿ ಒಪ್ಪಿಕೊಳ್ಳುವ, ಇಲ್ಲಿನ ಚಿಂತನೆ ಅನುಭವದಿಂದ ಮೂಡಿಬಂದ ಜ್ಞಾನವೆ ಆಗಿದೆ.

ಒಟ್ಟಿನಲ್ಲಿ 'ಸ್ವರೂಪ' ವ್ಯಕ್ತಿಯೊಬ್ಬನ ಸ್ವಂತಿಕೆಗೆ ಸ್ವರೂಪ ಕೊಡುವುದರ ಬಗೆಗಿನ ಪ್ರಯತ್ನವಾಗಿದ್ದರೂ, ಇದರಲ್ಲಿನ ಸಾಮಾಜಿಕ ಚಿಂತನೆಗಳು ಗಂಭೀರವಾಗಿ ಪರಿಗಣಿಸಬೇಕಾದವು ಎನ್ನುವುದನ್ನು ಮರೆಯುವಂತಿಲ್ಲ.

ನಿಗೂಢ ಮನುಷ್ಯರು ಕೃತಿಯಲ್ಲಿ ಮೊಟ್ಟಮೊದಲಬಾರಿಗೆ, ಪತ್ತೇದಾರಿತನ ಮೇಲುಗೈ ಪಡೆಯುವುದನ್ನು ನೋಡುತ್ತೇವೆ. (ಈ ರೀತಿಯ ಒಂದು ವಿಧವಾದ ಪತ್ತೇದಾರತನ, 'ಕರ್ವಾಲೋ' ಮತ್ತು 'ಚಿದಂಬರ ರಹಸ್ಯ' ಬೇರೆ ಬೇರೆ ಮಟ್ಟಗಳಲ್ಲಿ ಇಡೀ ಕತೆಯನ್ನು ವ್ಯಾಪಿಸುತ್ತದೆ) ಇಲ್ಲಿನ ಒಂದು ಮುಖ್ಯ ಪಾತ್ರವಾದ ಗೋಪಾಲಯ್ಯನ ಪಾತ್ರದಲ್ಲಂತೂ ಪತ್ತೇದಾರಿಕೆ ಅವನ ಬದುಕಿನ ಅವಿಭಾಜ್ಯ ಅಂಗವಾಗಿದೆ. ಹಲವಾರು ನಾಮ–ರೂಪಗಳನ್ನು ಧರಿಸಿದ ಆತನ ನಿಜವಾದ ವ್ಯಕ್ತಿತ್ವವನ್ನು ಅನ್ವೇಷಿಸಲು ಪ್ರಯತ್ನಿಸುವ ಜಗನ್ನಾಥ ಮತ್ತು ರಂಗಪ್ಪ–ಇವರ ಹುನ್ನಾರು ಕೂಡ, ಪತ್ತೆಗಾರಿಕೆಯೇ ಆಗುತ್ತದೆ. ಈ ನಿಟ್ಟಿನಲ್ಲಿ ನೋಡಿದಾಗ, ಎಲ್ಲ ಸಾಮಾಜಿಕ ಸ್ಥಿತ್ಯಂತರಗಳ ಹಿಂದೆ ಅಡಗಿರುವ ಸತ್ಯಾಸತ್ಯತೆಯನ್ನು ಪತ್ತೆಹಚ್ಚಲು ಒಬ್ಬ ಸಾಮಾಜಿಕ ವ್ಯಕ್ತಿ ನಡೆಸುವ ಹೋರಾಟವೇ, ತೇಜಸ್ವಿಯವರ ಮೂರು ಮುಖ್ಯ ಕೃತಿಗಳಾದ 'ನಿಗೂಢ ಮನುಷ್ಯರು', 'ಕರ್ವಾಲೊ' ಮತ್ತು 'ಚಿದಂಬರ ರಹಸ್ಯ'ಗಳ ಹಿಂದಿನ ಆರ್ಕ್‌ಪ್ಯಾರ್ಟರ್ನ್ ಅಥವಾ ಮೂಲ ಮಾದರಿ ಎಂದು ಹೇಳಬಹುದು. ಈ ಅನ್ವೇಷಣೆ ಮುಖ್ಯವಾಗಿ, ಸತ್ಯಶೋಧನೆಯೇ ಆದರೂ, ಅದರ ಪರಿಕ್ರಮದಲ್ಲಿ, ಸಾಮಾಜಿಕ ಸಂಬಂಧಗಳು ಮಹತ್ವದ ಪಾತ್ರವನ್ನು ವಹಿಸುತ್ತವೆ. ಆದ್ದರಿಂದ ಈ ಸಾಮಾಜಿಕ ಸಂಬಂಧಗಳನ್ನು ಒಡೆದು ನೋಡುವುದು ಕೂಡ, ತೇಜಸ್ವಿಯವರ ಬರೆಹದ ಒಂದು ಮುಖ್ಯ ಕ್ರಮವಾಗಿದೆ, ಎನ್ನುವುದನ್ನು ನಾವು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಮರಸರ, ಕಾಂಪು, ಲೋರಿ ಮತ್ತು ಕರಿಯ–ಇವರುಗಳ ಪ್ರಪಂಚವೊಂದೇ ಕಿರಾತ ಪ್ರಪಂಚವಲ್ಲ. ಗೋಪಾಲಯ್ಯ, ರಂಗಪ್ಪ ಮತ್ತು ಜಗನ್ನಾಥ–ಇಂಥಹ ನಾಗರಿಕ ವೇಷ ತೊಟ್ಟಿರುವ ಪಿತೂರಿಕೋರರ, ಸಂಚುಕೋರರ, ಪರಸ್ಪರ ಅಪನಂಬಿಕೆ ಪಡುವವರ ಪ್ರಪಂಚ ಕೂಡ ಕಿರಾತ ಪ್ರಪಂಚವೇ. ಗೋಪಾಲಯ್ಯ ಅಶ್ರಯ ನೀಡಿರುವ ನಾಲಿಗೆ ಕಳೆದುಕೊಂಡಿರುವ ಶಾರದೆ, ಈ ಇಡೀ ಸಮಾಜ ಯಾವ ಯಾವ ಮಟ್ಟಕ್ಕೆ ತನ್ನ ಕ್ರೌರ್ಯವನ್ನು ಕೊಂಡೊಯ್ಯಬಲ್ಲದು ಎನ್ನುವುದಕ್ಕೆ ಪುರಾವೆಯನ್ನು ಒದಗಿಸುತ್ತಾಳೆ. ರಾಮಾಯಣದಲ್ಲಿ ಕಿವಿ ಮೂಗುಗಳನ್ನು ಕತ್ತರಿಸುವುದರ ಮೂಲಕ ಅವಮಾನಗೊಳಿಸುವ ಪ್ರಕರಣ ಬರುತ್ತದೆ. ಆದರೆ ಇಲ್ಲಿ ಮಾನಮಾನದ ಪ್ರಶ್ನೆ ಮುಖ್ಯ ಅಲ್ಲ. ಒಬ್ಬ ವ್ಯಕ್ತಿ ಜೀವಂತ ವ್ಯಕ್ತಿಯಾಗಿದ್ದೂ ನಿರುಪಯೋಗಿಯಾಗಿ ತೊಳಲಬೇಕೆನ್ನುವುದು ಇಲ್ಲಿನ ಮುಖ್ಯ ಇರಾದೆ. ಈ ಹಿನ್ನೆಲೆ

ಯಲ್ಲಿ ಗೋಪಾಲಯ್ಯ ತನ್ನ ಜೀವನದ ಹಲವು ತಿರುವುಗಳ ಬಗ್ಗೆ ಹೇಳುತ್ತಾ ಎಷ್ಟನ್ನು ಮರೆಸುತ್ತಾನೆ, ಎಷ್ಟನ್ನು ತೆರೆದಿಡುತ್ತಾನೆ ಎನ್ನುವುದು ಪ್ರಶ್ನಾರ್ಹ.

ಈ ಪ್ರಪಂಚದಲ್ಲಿ, ಮರಸರ, ಕಾಂಪ್ರು, ಮತ್ತು ಲೋರಿಯಂತವರ ಕಿರಾತ ಪ್ರಪಂಚ ತನ್ನ ಬಾಹ್ಯ ಲಕ್ಷಣಗಳಿಂದ, ಓದುಗರಲ್ಲಿ ರಕ್ತ ಹೆಪ್ಪುಗಟ್ಟಿಸುತ್ತದೆ. ಆದರೂ ಈ ವಾಸ್ತವ ಕಿರಾತ ಪ್ರಪಂಚಕ್ಕಿಂತ ಮೇಲುನೋಟಕ್ಕೆ ನಾಗರೀಕರಂತೆ ಕಾಣುವ ವ್ಯಕ್ತಿಗಳ ಶೋಷಣಾ ಪ್ರಧಾನವಾದ ಇನ್ನೊಂದು ಪ್ರಪಂಚ ಹೆಚ್ಚು ರಾಕ್ಷಸೀ ಗುಣ ಹೊಂದಿದೆ ಎನ್ನುವುದು ಗಮನಾರ್ಹ. ಒಬ್ಬರ ಮೇಲೆ ಒಬ್ಬರು ಸದಾ ಪತ್ತೇದಾರಿಕೆ ಮಾಡು ತ್ತಿರುವ, ಹೊಂಚು ಹಾಕುತ್ತಿರುವ ಈ ನಾಗರಿಕ ಮೇಲ್ಮುಸುಕಿನ ಪ್ರಪಂಚದ ಮೇಲೆ, ಉಂಟಾಗುವ ಪ್ರಕೃತಿಯ ವಿಕೋಪ, ಇನ್ನೊಂದು ಸ್ತರಕ್ಕೆ ಸೇರಿದ್ದು, ಇಡೀ ಒಂದು ಜನ ವಸತಿಯೇ ನಾಶವಾಗುವ ಹಾಗೆ, ಉಗ್ರಗಿರಿ ಕುಸಿಯುವುದು ಪ್ರಕೃತಿಯ ಎದುರು ಮನುಷ್ಯನ ಎಲ್ಲಾ ಲೆಕ್ಕಾಚಾರವೂ ನಿರರ್ಥಕ ಎನ್ನುವುದನ್ನು ಎತ್ತಿ ತೋರಿಸುತ್ತದೆ. ಆದರೆ ಭೂಕಂಪ, ಬಿರುಗಾಳಿ–ಇವುಗಳ ಮೂಲಕ ಅದು ಬಿತ್ತುವ ಭೀತಿ, ಸಂಶಯ. ಸಂಚಿನ ಮನೋಭಾವ–ಇವು, ಈ ಪ್ರಕೃತಿ ವ್ಯಾಪಾರ ವನ್ನು, ಮನುಷ್ಯ ತನ್ನ ಗ್ರಹಿಕೆಯ ಮೂಲಕ ಅರ್ಥೈಸುವ ಪ್ರಯತ್ನವಾಗಿ, ಮನು ಷ್ಯನ ಸಣ್ಣತನವನ್ನು, ಸ್ವಾರ್ಥವನ್ನು ಬಿಂಬಿಸುತ್ತದೆ.

ಒಟ್ಟಿನಲ್ಲಿ, 'ನಿಗೂಢ ಮನುಷ್ಯರು' ಎನ್ನುವಲ್ಲಿ ನಿಗೂಢತೆ ಕೇವಲ ಮನುಷ್ಯ ವ್ಯಾಪಾರ ವನ್ನು ಮೀರಿದುದು ಎನ್ನುವುದು ಕಂಡುಬರುತ್ತದೆ. ಆದರೆ ಈ ಮಾನವೇತರ ಶಕ್ತಿ ಮತ್ತು ಅದರ ನಡವಳಿಕೆ ಕೂಡ, ಮನುಷ್ಯನನ್ನು ಇನ್ನಷ್ಟು ನಿಗೂಢ ಸ್ಥಿತಿಗೆ ಒಯ್ಯು ತ್ತದೆ, ಎಂಬ ಅಂಶ ಅತ್ಯಂತ ಗಮನಾರ್ಹ.

(iii) ಸಾಮಾಜಿಕವಾಗಿ ನೋಡುವುದಾದರೆ, 'ಕರ್ವಾಲೊ'ದಲ್ಲಿನ ಮಂದಣ್ಣನ ಪಾತ್ರ ಮಾತ್ರವೇ ಹೆಚ್ಚು ಗ್ರಾಹ್ಯವಾಗುತ್ತದೆ. ಮಂದಣ್ಣ ಕೆಳವರ್ಗದಿಂದ ಬಂದವನು, ಕರ್ವಾಲೊಗೆ ಆತನ ಬಗ್ಗೆ ವಿಶೇಷ ಪ್ರೀತಿ, ಆದರ. ಮಂದಣ್ಣನ ಮದುವೆ, ಹೆಂಡ ಕುಡುಕರಾದ ಅವನ ಮಾವನ ಮನೆಯವರು, ಪರಿಣಾಮವಾಗಿ ಮಂದಣ್ಣನ ಮೇಲೆ ಪೋಲೀಸ್ ಕೇಸ್ – ಇವುಗಳೆಲ್ಲ ಅವನ ಜೀವನದ ಒಂದು ಮುಖ. ಜೇನು ಸಾಕಣೆ ಯಲ್ಲಿನ ಅವನ ಪರಿಣತಿ, ಕರ್ವಾಲೊರಿಂದ ಪಡೆದ ಪ್ರಶಂಸೆ – ಇವು ಅವನ ಜೀವನದ ಇನ್ನೊಂದು ಮುಖ. ಸಾಮಾನ್ಯರಲ್ಲಿ ಸಾಮಾನ್ಯ ವ್ಯಕ್ತಿಯಾದ ಮಂದಣ್ಣನಲ್ಲಿಯೂ ಒಬ್ಬ ಶಕ್ಯವುಟ್ಟಿನ ಮೇಧಾವಿಯನ್ನು ಗುರುತಿಸುವುದು ಕರ್ವಾಲೊ ಅವರ ವಿಶಿಷ್ಟತೆ. ವ್ಯಕ್ತಿಗೆ ಸಾಮಾಜಿಕವಾಗಿ ಒಂದು ಸ್ಥಾನವನ್ನು ನಿರ್ದೇಶಿಸುವುದರಲ್ಲಿಯೇ ಕರ್ವಾಲೋ

ಅಂತಹ ವಿಜ್ಞಾನಿಯ ಹಿರಿಮೆ ಎಂಬ ಅಂಶದಲ್ಲಿಯೇ 'ಕರ್ವಾಲೋ' ಕಾದಂಬರಿಯ ಸಾಮಾಜಿಕ ಬದ್ಧತೆಯನ್ನು ಕಂಡುಕೊಳ್ಳಬಹುದು.

'ಚಿದಂಬರ ರಹಸ್ಯ'ದಲ್ಲಿ ಕ್ರಾಂತಿಕಾರಿಗಳು ಎಂದು ಕರೆದುಕೊಂಡರೂ, ನಿಜವಾದ ಕ್ರಾಂತಿಯ ಅರ್ಥ ಗೊತ್ತಿಲ್ಲದೆ, ಕೇವಲ ಪೊಳ್ಳು ಆದರ್ಶ ಹಾಗೂ ಹುಚ್ಚು ನಂಬಿಕೆಗಳ ಬೆನ್ನಟ್ಟಿದವರು ರಾಮಪ್ಪ (ಇಂಗ್ಲೀಷ್ ಗೌಡ), ಚಂದ್ರ, ಅಂಗಾರ ಮತ್ತು ರಮೇಶ. ಇದರ ಕ್ರಾಂತಿಕಾರಿ ಅನಿಸಿಕೆಗಳ ಮಧ್ಯೆಯೂ, ಇಂಗ್ಲೀಷ್ ಗೌಡ, ತಮ್ಮ ಮಾವನ ಮನೆಯ ಪಾತ್ರೆ ಪಡಗ ಹರಾಜು ಹಾಕಬೇಕಾದ ಸ್ಥಿತಿ ಬಂದಾಗ ತಮಟೆ ಹೊಡೆದು ಸಾರುತ್ತಿದ್ದ ಬಾಲಯ್ಯನ ಜತೆ ಜಗಳ ತೆಗೆದು ಹೊಡೆದಾಟಕ್ಕೆ ತೊಡಗುವುದು ಇದರ ಕ್ರಾಂತಿಯ ಬಗೆಗಿನ ಕಲ್ಪನೆಗೆ ಕನ್ನಡಿ ಹಿಡಿಯುತ್ತದೆ. ಇದೊಂದು ಘಟನೆಯ ಹಿನ್ನೆಲೆಯಲ್ಲಿ ನಡೆಯುವ ಕೃಷ್ಣೇಗೌಡನ ತೋಟದ ಕೆಲಸಗಾರರು ಮತ್ತು ಇಂಗ್ಲೀಷ್ ಗೌಡನ ಬೆಂಬಲಿಗರ ನಡುವಿನ ಹೊಡೆದಾಟ, ಇವೆಲ್ಲ ಕಾಲೇಜು ಹುಡುಗರು ಎಂದು ತಿಳಿದಾಗ, ಕೃಷ್ಣೇಗೌಡ ಇವರ ಬಗ್ಗೆ ಉದಾರತೆಯಿಂದ ನಡೆದುಕೊಳ್ಳುವುದು, ಇವೆಲ್ಲವನ್ನೂ ಸಾಂಕೇತವಾಗಿ ನೋಡಿದರೆ, ಕಾದಂಬರಿಯ ಉದ್ದಕ್ಕೂ ಹೇಗೆ ಪ್ರತಿಯೊಂದು ಘಟನೆಯೂ ಒಂದಲ್ಲ ಒಂದು ಅಸಂಬದ್ಧ ಬೆಳವಣಿಗೆಯ ಫಲವಾಗಿ ಉಂಟಾಗುತ್ತದೆ, ಎನ್ನುವುದು ಅರ್ಥವಾಗುತ್ತದೆ.

ಹೀಗೆ ನೋಡಿದಾಗ ಶಾಮನಂದನ ಅಂಗಾಡಿ ಉರುಫ್ ಶ್ಯಾಮೇಗೌಡನ ಪತ್ತೇದಾರಿ ಕಾರ್ಯವೆಲ್ಲವೂ ನಿರರ್ಥಕವಾಗಿ ಕಂಡುಬರುತ್ತದೆ. ಡಾ|| ಜೋಗಿಹಾಳರ ಸಾವಿಗೆ ಅಂತರರಾಷ್ಟ್ರೀಯ ಮಟ್ಟದ ಗೂಢಚರ್ಯೆಯೂ ಕಾರಣವಾಗಿರಬಹುದು ಎಂಬ ಅಂಶ ಕೂಡ, ಹೇಗೆ ಯಾವುದೊಂದು ದೇಶೀಯ ವ್ಯವಸ್ಥೆಯೂ ತನಗೆ ತಾನೇ ಸ್ವತಂತ್ರವಾಗಿಲ್ಲ ; ಸ್ವತಂತ್ರವಾಗಿ ಕೆಲಸ ಮಾಡುತ್ತಿಲ್ಲ ಎಂಬ ಅಂಶವನ್ನು ಬಯಲು ಮಾಡುತ್ತದೆ.

ಈ ಸಮಸ್ಯೆಗೆ ಇನ್ನೊಂದು ಆಯಾಮ ಒದಗಿಸುವುದು ಸುಲೇಮಾನ್ ಬ್ಯಾರಿಯ ಒಳಸಂಚಿನ ವ್ಯವಹಾರಗಳು. ಏಲಕ್ಕಿ ತೋಟಗಳನ್ನು ಕಡಿದುಹಾಕಿ, ಕಳ್ಳಸಾಗಾಣಿಕೆ ಮಾಡಿ, ಅದೇ ಜಾಗದಲ್ಲಿ ಗುಟ್ಟಾಗಿ ಅಫೀಮು ಬೆಳೆಸಿ, ಲಾಂಟಾನಾ ಜಗ್ಗಿನಲ್ಲಿ ಅದನ್ನು ಮರೆಮಾಚುವ ಬ್ಯಾರಿಯ ದೇಶದ್ರೋಹಿ ಚಟುವಟಿಕೆ ಇಡೀ ಕೆಸರೂರಿನ ಅನಾರೋಗ್ಯದ ಬೇರುಗಳು ಎಷ್ಟು ಜಟಿಲವಾಗಿವೆ ಎನ್ನುವುದನ್ನು ಬಿಚ್ಚಿತೋರಿಸುತ್ತದೆ.

ಆದರೆ ನಿಜವಾದ ದುರಂತ ಅಡಗಿರುವುದು ಸಾಮಾನ್ಯ ಜನಗಳ ಜೀವನದಲ್ಲಿ. ವೃತ್ತಿಯಿಂದ ಬ್ರೀಡರ್‌ನಾದ ಮಹಮುದ್‌ನ ಉದಾಹರಣೆ ಗಮನಾರ್ಹ. ಅನುಮಾನಾಸ್ಪದ ರೀತಿಯಲ್ಲಿ ತೀರಿಹೋದ ಡಾ|| ಜೋಗಿಹಾಳರ ಸಾವಿಗೆ ಮಹಮುದ್‌ನೇ ಕಾರಣನೇನೋ ಎಂಬ ಸಂಶಯವನ್ನು ಅವನಲ್ಲಿಯೇ ಬೆಳೆಯುವ ಹಾಗೆ ಮಾಡಿದ ಸನ್ನಿವೇಶ. ಅವನ

ದೌರ್ಬಲ್ಯ ಹಾಗೂ ಮಿತಿಗಳನ್ನು ತೋರಿಸುತ್ತದೆ. ಡಾ|| ಜೋಗಿಹಾಳರ ಸ್ಥಾನದಲ್ಲಿ ಬಂದಿರುವ ಡಾ|| ಪಾಟೀಲರು ಹಳೆಯ ಫೈಲುಗಳನ್ನೆಲ್ಲ ತೆಗೆದುನೋಡಲಿಕ್ಕೆ ಪ್ರಾರಂಭಿಸಿದ ಮೇಲೆ, ಸಿದ್ದಪ್ಪ ಹಾಗೂ ಹೆಗ್ಡೆ ಜತೆಯಲ್ಲಿ, ಮತ್ತು ಅವರಿಗಿಂತ ಹೆಚ್ಚಾಗಿ ತೊಳಲಾಟಕ್ಕೆ ಮುಹಮದ್ ಸಿಕ್ಕಿಹಾಕಿಕೊಳ್ಳುತ್ತಾನೆ, ಕತ್ತಾರ್ ಅಥವಾ ಬೆಹರಿನ್‌ಗೆ ಹೊರಟುಹೋಗಲು, ವೀಸಾ ರೆಡಿಮಾಡಿಸಿಕೊಂಡಿರುವ ಮುಹಮದ್, ಮದುವೆಯಾಗದೆಯೆ ಕಾತರದಿಂದ ಕಾಯುತ್ತಿದ್ದಾನೆ. ಇಂತಹ ಸಂದರ್ಭದಲ್ಲಿ ಸೆಂಟ್ರಲ್ ಇಂಟೆಲಿಜೆನ್ಸ್‌ನಿಂದ ಬಂದಿರುವ ಅಂಗಾಡಿ, ಸುಲೇಮಾನ್ ಬ್ಯಾರಿಯ ಒಳವ್ಯವಹಾರಗಳನ್ನು ಪತ್ತೆಹಚ್ಚಲು ಬಂದಿದ್ದಾನೆ ಎಂಬ ಗುಮಾನಿ ಉಂಟಾಗಿ, ಜಾತಿವಸ್ತರಾದ ಮುಸಲ್ಮಾನರು ಮುಹಮ್ಮದನ ಮೇಲೆ ಸಂಶಯಗ್ರಸ್ತರಾಗುತ್ತಾರೆ. ಮುಹಮ್ಮದ್ ಮತ್ತೆ ನಮಗೆ ಕಂಡುಬರುವುದು, ರಫಿ ಮತ್ತು ಜಯಂತಿಯರನ್ನು ಕಾಪಾಡಬೇಕೆಂದು, ಆತ ರಾಮಚಂದ್ರನ ಬಳಿ ಪ್ರಾರ್ಥಿಸಿಕೊಳ್ಳುವಾಗ. ರಫಿ ಮತ್ತು ಜಯಂತಿ, ತಮ್ಮ ಸುತ್ತಲೂ ಹಬ್ಬಿ ಹರಡುತ್ತಿರುವ ಜಾತೀಯತೆಯ ದಳ್ಳುರಿಯಿಂದ ತಪ್ಪಿಸಿಕೊಳ್ಳಬೇಕಾದರೆ, ಅದಕ್ಕೆ ಮುಹಮ್ಮದನೇ ಬಹಳಷ್ಟು ಕಾರಣ ಎಂದು ನಾವು ಗಮನಿಸಬೇಕು.

ಕಾಲೇಜು ಅಧ್ಯಾಪಕ, ರಾಮಚಂದ್ರ, ಲೇಖಕ ಜಯರಾಂ, ನಿರ್ದೇಶಕ ಡಾ|| ಪಾಟೀಲ –ಇಂತಹ ವಿದ್ಯಾವಂತರೂ, ಉನ್ನತ ಆದರ್ಶಗಳನ್ನು ಇಟ್ಟುಕೊಂಡವರೂ ನಡೆದುಕೊಳ್ಳುವ ರೀತಿಗೆ ಹೋಲಿಸಿದರೆ, ಮುಹಮ್ಮದನ ನಡವಳಿಕೆ ಹೆಚ್ಚು ಅರ್ಥಪೂರ್ಣ. ಆತ ತನ್ನ ಮಿತಿಯಲ್ಲಿ ಹೆಚ್ಚು ಮಾತಿಲ್ಲದೆ ತನ್ನ ಶಕ್ತಿಮೀರಿ ಆತ ದುಡಿಯುತ್ತಾನೆ. ಇದೇ ಬಗೆಯ ನಡವಳಿಕೆ, ಪಟ್ಟಭದ್ರ ಹಿತಾಸಕ್ತ ಜನಗಳಾದ ಕೃಷ್ಣೇಗೌಡ, ರಾಮಾಚಾರಿ, ಸುಲೇಮಾನ್ ಬ್ಯಾರಿ, ಅಬ್ಬಾಸ್ ಬ್ಯಾರಿ – ಇವರುಗಳ ಸ್ವಾರ್ಥ ಪ್ರೇರಿತ ನಡವಳಿಕೆ ಮುಂದೆ ಕೂಡಾ ಮುಹಮ್ಮದನ ನಡವಳಿಕೆ ಹೆಚ್ಚು ಅರ್ಥಪೂರ್ಣವೆನಿಸುತ್ತದೆ.

ಒಟ್ಟಿನಲ್ಲಿ ಇಡೀ ಒಂದು ಸಮುದಾಯದ ಅವನತಿಯನ್ನು ಅಲ್ಲಿನ ಸ್ವಾರ್ಥಪೂರಿತ ಪ್ರತಿಷ್ಠಿತ ವ್ಯಕ್ತಿಗಳು, ಆದರ್ಶಗಳಿದ್ದೂ ಕೆಲಸ ಮಾಡಲು ಅವಕಾಶ ಹೊಂದಿದ್ದೂ ಸಮರ್ಥ ಅಧಿಕಾರಿಗಳೂ ಹಾಗೂ ಗೋಸಾಯಿಗಳ, ಮೆಜಿಷಿಯನ್ ಮುಂತಾದ ಮತ್ತು ಅಂತಹ ಹಲವಾರು ಜನಗಳ ಪಿತೂರಿಯ ಬಾಯಿ ಕಣ್ಣು ಕಿವಿಗಳಾದ ವಿವೇಚನಾರಹಿತ ರೀತಿ ನೀತಿಯ ಜನಗಳು ತಂದೊಡ್ಡಬಲ್ಲರು ಎನ್ನುವುದನ್ನು 'ಚಿದಂಬರ ರಹಸ್ಯ' ಬಿಚ್ಚಿ ತೋರಿಸುತ್ತದೆ. ಸ್ವಾತಂತ್ರ್ಯ ಬಂದ ನಂತರದ ನಲವತ್ತು ವರ್ಷಗಳಲ್ಲಿ ನಮ್ಮ ಸಮಾಜ ಪಡೆದಿರುವ ವಿಕೃತ ತಿರುವುಗಳಿಗೆ, ಸಂಕೀರ್ಣ ಬೆಳವಣಿಗೆಗಳಿಗೆ ಕನ್ನಡಿ ಹಿಡಿಯುವುದರಲ್ಲಿ "ಚಿದಂಬರ ರಹಸ್ಯ" ಯಶಸ್ವಿಯಾಗಿದೆ ಎಂದಷ್ಟೇ ಹೇಳಬಹುದು.

(ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಅವರ ಸಾಹಿತ್ಯದ ಬಗ್ಗೆ ಈಚೆಗೆ ಬೆಂಗಳೂರಿನಲ್ಲಿ ನಡೆದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ)

# ಪು. ತಿ. ನ. ಅವರ ಮಹಾಕಾವ್ಯ 'ಶ್ರೀಹರಿ ಚರಿತೆ' :

## ಒಂದು ಟಿಪ್ಪಣಿ

—ಮಲ್ಲೇಪುರಂ ಜಿ. ವೆಂಕಟೇಶ್

ಪುರೋಹಿತ ತಿರುನಾರಾಯಣ ನರಸಿಂಹಾಚಾರ್, ಕನ್ನಡದ ಒಂದು ವಿಶಿಷ್ಟ ದನಿ. ಅವರ ಈಚೆಗೆ ಪ್ರಕಟವಾದ 'ಶ್ರೀಹರಿಚರಿತೆ' ಆಧುನಿಕ ಮಹಾಕಾವ್ಯ. ಇದು ಸಂಪ್ರದಾಯದ ಮೂಲಕ 'ಮಹಾಕಾವ್ಯ' ಹೌದೋ ಅಲ್ಲವೊ ಎಂಬ ಪ್ರಶ್ನೆಗೆ ನಾನು ಹೊರಡುವುದಿಲ್ಲ. ಅಥವಾ ಆಧುನಿಕಾರ್ಥದಲ್ಲಿ ಇದು 'ಮಹಾಕಾವ್ಯ'ವೋ ಎಂಬ ವಿಚಾರಕ್ಕೂ ನಾನು ತಲೆಹಾಕುವುದಿಲ್ಲ. ಒಂದಂತೂ ಸ್ಪಷ್ಟ. ಪು.ತಿ.ನ ಅವರ ಅಭಿಪ್ರಾಯದಲ್ಲಿ ಇದು 'ಬೃಹಚ್ಛಂದಸ್ಸಿನ ಮಹಾಕಾವ್ಯ'ವಂತೂ ನಿಜ. ಕವಿ ವಿವಕ್ಷೆ ಇಲ್ಲಿ ಪ್ರಾಧಾನ್ಯ ಎಂದರೆ ಇದು ಮಹಾಕಾವ್ಯವೇ. ಸಹೃದಯ ಓದುಗನ ಹಿರ್ರ್ಯಾನವೆಂದರೆ ಇದು ಮಹಾಕಾವ್ಯವೋ ಮಹಾಕಾವ್ಯದ ಆಕಾಂಕ್ಷೆಯುಳ್ಳ ಕೃತಿಯೋ ? ಎಂಬುದು ಮತ್ತಷ್ಟು ಜಿಜ್ಞಾಸೆಗೆ ನಮ್ಮನ್ನು ತಳ್ಳುತ್ತವೆ.

ಹಲವಾರು ವರ್ಷಗಳಿಂದ ಪು ತಿ.ನ. ಅವರು 'ಮಹಾಕಾವ್ಯ' ಬರೆಯುತ್ತಿರುವುದು ತಿಳಿದಿತ್ತೇ ಹೊರತು ಅದರ ಪ್ರಕಟಣೆ ಇದುವರೆಗೂ ಆಗಿರಲಿಲ್ಲ. ಈಗ ಅಂದವಾಗಿ ಕವಿ ಹೃದಯದ ಭಾವಸ್ಪಂದನದಂತೆ ಶ್ರೀಮಾನ್ ಡಿ.ವಿ.ಕೆ. ಮೂರ್ತಿ ಅವರು ಪ್ರಚುರಪಡಿಸಿದ್ದಾರೆ. ಓದುಗರಿಗೆ, ಕಾವ್ಯಾಸಕ್ತರಿಗೆ ಕೊಟ್ಟಿದ್ದಾರೆ. 'ಶ್ರೀಹರಿಚರಿತೆ' ಹೆಸರಿಗೆ ತಕ್ಕಂತೆ ಇದು 'ಶ್ರೀಮದ್ಭಾಗವತ'ದಿಂದ ಪ್ರೇರಿತವಾದದ್ದು. ಶ್ರೀಮದ್ಭಾಗವತ ವೈಷ್ಣವ ಸರ್ವೋತ್ತಮರಿಗೆ ಆರಾಧನಾಗ್ರಂಥ. ಶ್ರೀ ಪು.ತಿ.ನ. ಅವರಿಗಂತೂ ಮೂಲ ಸಂಸ್ಕೃತ ಭಾಗವತದ ಅಧ್ಯಯನ ಅವರ ಅನುದಿನದ ಪಾರಾಯಣ ಗ್ರಂಥವೂ ಹೌದು. ಹೀಗಾಗಿ, ಇಲ್ಲಿ 'ಶ್ರೀಮದ್ಭಾಗವತ'ದ ಅನೇಕ ಭಾವಗಳೂ, ಉಕ್ತಿಗಳು ಇಲ್ಲಿ ಕನ್ನಡಾವತಾರವನ್ನು ಧರಿಸಿವೆ ಎಂಬುದನ್ನು ಸ್ಪಷ್ಟಪಡಿಸಿಕೊಳ್ಳಬಹುದು. ಆದರೆ, ಇದರಿಂದ ಕವಿ ಪು.ತಿ.ನ. ಅವರು ನಮ್ಮ ಅಭಿಜಾತ ಸಾಹಿತ್ಯದ ಗುಣಲಕ್ಷಣಗಳನ್ನೂ ಪಾತ್ರಗಳ ರಚನೆಯಲ್ಲಿ ಶೀಲವೈಶಿಷ್ಟ್ಯವನ್ನೂ ಮೆರೆದಿದ್ದಾರೆಂದು ಹೇಳಬಹುದೆಂದು ತೋರುತ್ತದೆ. ಇನ್ನು ಎರಡನೆಯ ಅಂಶವೆಂದರೆ 'ಮಹಾಕಾವ್ಯ'ವನ್ನು ಮೂವತ್ತಮೂರು 'ಉಲ್ಲಾಸ'ಗಳಾಗಿ ವಿಂಗಡಿಸಿದ್ದಾರೆ. ಒಂದು ರೀತಿಯಲ್ಲಿ ಕಥೆಯ ಚೌಕಟ್ಟಿಗೆ ಒಳಪಟ್ಟುಕೊಂಡೇ 'ಉಲ್ಲಾಸ'ಗಳಾಗಿ ವಿಂಗಡಿಸಿರುವುದು ಆಧುನಿಕಾರ್ಥದಲ್ಲಿ 'ಕಾದಂಬರಿ'ಯ ತಂತ್ರವನ್ನು

ಹೋಲುತ್ತದೆ. ಒಂದು ಪ್ರಮುಖ ಘಟ್ಟಕ್ಕೆ, ಒಂದು ಮಹದ್‌ತಿರುವಿಗೆ ಆ ಉಲ್ಲಾಸ ಗಳನ್ನು ಮುಗಿಸಿ – ಮುಂದಿನ ಉಲ್ಲಾಸದಲ್ಲಿ ಅದರ ಕಥೆಯನ್ನು ಕಥನದ ಸ್ವರೂಪ ದಲ್ಲಿ ಕಟ್ಟಿಕೊಡುತ್ತಾರೆ. ಆದರೆ, ಇದೇ ಸಂದರ್ಭದಲ್ಲಿ ಹೇಳಬೇಕಾದ ಮಾತೊಂದು ಇದೆ. ನಮ್ಮ ಕನ್ನಡದ ಮಾರ್ಗಕಾವ್ಯಗಳ ಅಂತ್ಯನಲ್ಲಿ ಬರುವ ಗದ್ಯಗಳಂತೆ ಪು.ತಿ.ನ. ಅವರೂ ಸಹ ಅಧ್ಯಾಯ ಉಲ್ಲಾಸದ ಕೊನೆಗೆ ಒಂದು ಅಥವಾ ಎರಡು ಸಾಲಿನ ಗದ್ಯ ವನ್ನು "ತಂದು" 'ಮಹಾಕಾವ್ಯ'ದ ಒಂದು ವಿಶಿಷ್ಟ ದನಿಯನ್ನು ತರುತ್ತಾರೆ. ಅದನ್ನು ಓದುತ್ತಿರುವಾಗ ನಮಗೆ ಕನ್ನಡದ 'ಮಹಾಕಾವ್ಯ'ಗಳ ಸಾಂಪ್ರದಾಯಿಕ ಚೌಕಟ್ಟು ಅದರ ಮೂಲಕ ಕನ್ನಡದ ಪ್ರಸ್ತುತ ಕಾವ್ಯಗಳ ಹಿನ್ನೆಲೆಯನ್ನು ಮಿಗಿಲಿಸುತ್ತಾರೆಂದು ನನಗೆ ತೋರುತ್ತದೆ.

ಇನ್ನು ಮೂರನೆಯ ಅಂಶ 'ಮಹಾಕಾವ್ಯ'ದ ಆಶಯಕ್ಕೆ ಸಂಬಂಧಿಸಿದ್ದು. ಶ್ರೀಹರಿ ಚರಿತೆ ಮೂಲಕ ಕವಿ ಪು.ತಿ.ನ. ಹೇಳಬೇಕಾಗಿರುವ ಅಂಶವೇ ಬೇರೆ. ಅದು ಶ್ರೀಮದ್ಭಾಗವತದ ನಿರ್ದಿಷ್ಟ ಯಥಾನುವಾದವಲ್ಲ. ಪು.ತಿ.ನ. ಅವರ ಅರಿಕೆಯಲ್ಲಿ ಹೇಳಿರುವ ಈ ಮಾತು 'ಮಹಾಕಾವ್ಯ'ದ ಆಶಯವನ್ನು ಅದರ ಸೊದ್ದಿಷ್ಟ ಶಿರ್ಯ್ರಾನ ವನ್ನೂ ಚೆನ್ನಾಗಿ ತಿಳಿಸುತ್ತದೆ. "ಶ್ರೀಕೃಷ್ಣನನ್ನು ದೇವರೆಂದು ಭಾವಿಸಿ ಆತನ ಸ್ಮರಣೆಯನ್ನು ಜೀವಂತವಾಗಿ ಇರಿಸಿಕೊಳ್ಳುವುದು ಲೇಸೇ ಸರಿ. ಭಗವದ್ಗೀತೆಯನ್ನು ಮೋಕ್ಷಶಾಸ್ತ್ರವೆಂದು ಪರಿಗಣಿಸಿ ಮತೀಯ ಗ್ರಂಥವಾಗಿ ಎಣಿಸಿ, ಆಚಾರ್ಯರುಗಳ ಭಾಷ್ಯಾದಿಗಳನ್ನು ಓದಿ ಮನಸ್ಸಂಸ್ಕಾರವನ್ನು ಪಡೆಯುವುದೂ ಶ್ರೇಷ್ಠವೇ ಸರಿ. ಆದರೆ, ಈಗಿನ ಸಾಂಸ್ಕೃತಿಕ ವಾತಾವರಣದಲ್ಲಿ ದೇವರು, ಪಾವಿತ್ರ್ಯ, ಗುಡಿ, ಮಠ, ಮೋಕ್ಷ ಮುಂತಾದ ಮಾತುಗಳು ಐಹಿಕ ಜೀವನದಲ್ಲಿ ನಮ್ಮ ದಾರಿಯನ್ನು ಕೆಡಿಸುವ ಶಂಕೆ ಇದೆ. ಈ ಕಾರ್ಯಗಳಲ್ಲಿ ಫಲಾಭಿಸಂಧಿಯಿಂದಲೂ ಕಾಲಕ್ಷೇಪಕ್ಕಾಗಿಯೂ ನಡೆ ಯುತ್ತಿರುವುದರಿಂದ ನಾಡಿನ ಸಮಷ್ಟಿ ಜೀವನಕ್ಕೆ ಇವುಗಳಿಂದ ಆಧ್ಯಾತ್ಮಿಕ ಊರ್ಜಾ ಲಾಭ ಕಡಿಮೆ ಎಂದೇ ತೋರುತ್ತಿದೆ. ಇವುಗಳಿಗಿಂತ ಹೆಚ್ಚಾಗಿ ಯೋಗೀಶ್ವರನಾದ ಶ್ರೀಕೃಷ್ಣನ ಮತ್ತು ಧನುರ್ಧರನಾದ ಅರ್ಜುನನ ಸಾನ್ನಿಧ್ಯ ರಾಜಕಾರಣಿಗಳಲ್ಲಿ, ರಾಷ್ಟ್ರ ನಾಯಕರಲ್ಲಿ ರಾಜ್ಯಸಭೆ, ಶಾಸನಸಭೆಗಳಲ್ಲಿ ಕಲ್ಪಿತವಾಗಬೇಕಾಗಿದೆ. ಏಕೆಂದರೆ ಈ ಪ್ರಮುಖರು ನಾಡಿನ ಕಾರ್ಪಣ್ಯವನ್ನು ಹೋಗಲಾಡಿಸಿ ಜನರ ಯೋಗಕ್ಷೇಮವನ್ನು ನ್ಯಾಯರೀತಿಯಲ್ಲಿ ನೋಡಿಕೊಳ್ಳಲು ವಚನಬದ್ಧರಾಗಿದ್ದಾರೆ. ಇದು ಆ ದೇವರ, ಈ ದೇವರ, ಆ ಮತ ಈ ಮತದ, ಆ ಜಾತಿ ಈ ಜಾತಿಯ, ಆ ಪಂಗಡ ಈ ಪಂಗಡದ, ಆ ವರ್ಗದ ಈ ವರ್ಗದ, ಆ ಪ್ರಾಂತ ಈ ಪ್ರಾಂತದ ಮೇಲುಗಾರಿಕೆ ಕೀಳುಗಾರಿಕೆಯ ಆಸ್ತಿಕ್ಯ ನಾಸ್ತಿಕ್ಯದ, ಆ ಹಿತಾಸಕ್ತಿ ಈ ಹಿತಾಸಕ್ತಿಯ ಹೋರುವಣಿಯ ಪ್ರಶ್ನೆಯೇ

ಅಲ್ಲ. "ಮಾನವ ಇಲ್ಲಿ ಈಗ ಹೇಗೆ ಚೆನ್ನಾಗಿ ಬದುಕಬೇಕೆಂಬ ಪ್ರಶ್ನೆ. ವ್ಯಕ್ತಿಗೂ ಸಮಷ್ಟಿಗೂ ಇರುವ ಅನ್ಯೋನ್ಯತೆಯ ಪ್ರಶ್ನೆ". (ಅರಿಕೆ : ಪು. xix) ಇಲ್ಲಿ ಈ ಮಹಾಕಾವ್ಯದ ಒಟ್ಟು ಆಶಯ ಇದೇ ಆಗಿದೆ. ವ್ಯಕ್ತಿಗಳಾಗಿ ಕೃಷ್ಣನ ಅಡಿಯಲ್ಲಿ ಬರುವ, ಅವನ ನೆರಳು ಕಾಣಿಸುವ ಪಾತ್ರಗಳಾದರೆ ; ಶ್ರೀಕೃಷ್ಣ ಇಲ್ಲಿ ಸಮಷ್ಟಿ ತತ್ವದ ಪ್ರತೀಕವಾಗಿ ಕಾಣಿಸಿಕೊಳ್ಳುತ್ತಾನೆ. ಈ ದೃಷ್ಟಿಯಿಂದ, ಈ ಆಶಯವೇ ಪ್ರಧಾನ ವಾಗಿ ಶ್ರೀ ಹರಿಚರಿತೆಯಲ್ಲಿ ವ್ಯಾಪಕವಾಗಿ ಕಾಣಿಸಿಕೊಂಡಿದೆ. ಹೀಗಾಗಿ ನಮ್ಮ ಸಮ ಕಾಲೀನ ಬದುಕನ್ನು ಮೇಲಿನ ಕೋನದಿಂದ ನೋಡಲಾಗಿದೆ. ವರ್ತಮಾನಕಾಲದ ಪ್ರಸ್ತುತತೆಯನ್ನು ಇಲ್ಲಿ ಪ್ರಧಾನವಾಗಿ ಸ್ವೀಕರಿಸಲಾಗಿದೆ. ಕಾವ್ಯದ ಒಂದೆಡೆ ಕಾಣಿ ಸುವ ಈ ಮಾತನ್ನು ಇಲ್ಲಿ ಗಮನಿಸಬಹುದು.

> ವ್ಯಕ್ತಿಗೆ ಕರ್ಮ ಸಮಷ್ಟಿಗೆ ಫಲ, ಇದರ ವಿತರಣೆಯೊಳಗೆ
> ನಿಷ್ಪಕ್ಷಪಾತಂ, ದಕ್ಷತೆ ಲೋಭಕಿಸಿತೆಡೆಗೊಡದಂದ
> ಬೇಕೆನಿಸುವಗೆ ಸಾಕೆನುವನಿತು ಒಬ್ಬನ ಹಿತಕೆ ಮತ್ತ
> ನಿಬಿಡದು ತೊಡಕಾಗಪೊಲು ಬದುಕಿನ ಸಲಿಕೆ – ಇಂಥ ಫಲ
> ಸಂಚಲನದಿಂ ವರ್ಧಿಪುದು ಕರ್ಮೋತ್ಸಾಹಂ, ಸಮಷ್ಟಿಗು
> ಋದ್ಧಿ. (ಪು. 183. ಸಾಲು 62-67)

ಹೀಗಾಗಿ 'ಮಹಾಕಾವ್ಯ'ದಲ್ಲಿ ಆಧುನಿಕ ಜೀವನದ ಆಶಯದಲ್ಲಿ ಮೈವೆತ್ತಿ ನಿಂತಿರುವುದನ್ನು ಅದೂ ಕೂಡಾ ವಾಸ್ತವದ ನೆಲೆಯಲ್ಲಿ ನಿಂತಿರುವುದನ್ನು ನಾವು ಕಾಣಬಹುದು.

ಕವಿ ಪು.ತಿ.ನ. ಅವರ 'ಶ್ರೀ ಹರಿಚರಿತೆ'ಯ ವ್ಯಾಪಕವಾದ ಅಧ್ಯಯನ ಆಗಬೇಕಾಗಿದೆ. ಕಾವ್ಯಕಲೆಯ ದೃಷ್ಟಿಯಿಂದ, ಛಂದಸ್ಸಿನ ಅಭ್ಯಾಸದ ದೃಷ್ಟಿಯಿಂದ, ಕಾದಂಬರಿ ತಂತ್ರ, ಅಭಿಜಾತ ಮಹಾಕಾವ್ಯಗಳ ಸ್ವರೂಪ ಮತ್ತು ಅಭಿವ್ಯಕ್ತಿಯು ಇಲ್ಲಿ ಬೇರೊಂದು ಸ್ವರೂಪದಲ್ಲಿ ಮೈವೆತ್ತಿರುವ ದೃಷ್ಟಿಯಿಂದ, ಉಳಿದ ಈ ಶತಮಾನದ ಮಹಾ ಕಾವ್ಯಗಳಾದ ಕುವೆಂಪು ರಾಮಾಯಣ ದರ್ಶನಂ, ಗೋಕಾಕರ ಭಾರತ ಸಿಂಧು ರಶ್ಮಿ, ಭೂಸನೂರಮಠ ಅವರ 'ಭವ್ಯಮಾನವ' – ಈ ಮೂರೂ ಕಾವ್ಯಗಳೊಡನೆ ಆಶಯ ಮತ್ತು ಆಕೃತಿಯ ದೃಷ್ಟಿಯಿಂದಲೂ ಪರಿಶೀಲಿಸಬೇಕಾದ ಅಗತ್ಯತೆ ಇರುವುದನ್ನು ಅರಿಕೆ ಮಾಡುತ್ತ ಈ ಟಿಪ್ಪಣಿಯನ್ನು ಮುಗಿಸುತ್ತೇನೆ.

# ಬಿ. ಆರ್. ಲಕ್ಷ್ಮಣರಾವ್‌ರ ಶಾಂಗ್ರಿ-ಲಾ

—ಸ. ರಘುನಾಥ

—೧—

ಬಿ. ಆರ್. ಲಕ್ಷ್ಮಣರಾವ್ ಜನಪ್ರಿಯ ಕವಿ. ಹಾಗೆ ನವ್ಯ ಪೀಳಿಗೆಯ ಒಂದು ತಲೆ ಮಾರಿನ ಗಮನಾರ್ಹ ಕವಿಯೂ ಹೌದು. ಲಘು ಸಂಗೀತದ ಮಾಧುರ್ಯವನ್ನು ರೂಢಿಸಿಕೊಂಡ ಸ್ವಭಾವ, ಕಾವ್ಯವಸ್ತು, ನವ್ಯದ ಸಂಕೀರ್ಣ ಪ್ರತಿಮಾ ವಿಧಾನ ದಿಂದ ಸಾಕಷ್ಟು ಹೊರನಿಂತು ಸಾಧಿಸಿದ ಅಭಿವ್ಯಕ್ತಿ ಕ್ರಮ ; ಭಾವ ತೊನೆಯುವ ಭಾಷಾ ಬಂಧ, ಕಲೆಗಾರಿಕೆಯ ಒಪ್ಪ-ಓರಣ, ನಾತುಗಾರಿಕೆಯ ಅಚ್ಚುಕಟ್ಟು, ಲಯ ಪ್ರಾಸಗಳ ಮಧುರತೆ ಇವರ ಕಾವ್ಯವನ್ನು ಜನಪ್ರಿಯಗೊಳಿಸಲು ಮುಖ್ಯ ಕಾರಣ ಗಳಾಗಿವೆ.

ತರುಣ ಮನಸ್ಸಿನ ಏರಾಟಗಳ, ತುಮುಲಗಳ, ತುಂಟುಗಾರಿಕೆಯ ಒಳಗೇ ಧ್ವನಿಸುವ ವಿಷಾದ, "ಗೋಪಿ ಮತ್ತು ಗಾಂಡಲೀನ" ಸಂಕಲನದ ಕವಿತೆಗಳಲ್ಲಿ ಅನಾವರಣಗೊಂಡು, ನಂತರದ ಇವರ ಕಾವ್ಯಕೃಷಿ ಬಯಲಿನಲ್ಲಿ ಬೆಳೆದ ಬೆಳೆಯಲ್ಲಿ ಸಂತುಷ್ಟಿಯನ್ನು ಕಾಣ ಬಹುದು, ಇವರ ಎಷ್ಟೋ ಕವಿತೆಗಳು ಜೀವಧ್ವನಿಯನ್ನು ಹೊಮ್ಮುತ್ತಲೆ ವಿಷಾದಕ್ಕೆ ಇಂಬು ಕೊಡುವುದು ಸೂಕ್ಷ್ಮ ಗ್ರಹಿಕೆಗೆ ದಕ್ಕುತ್ತದೆ.

ನಾನು (ವ್ಯಕ್ತಿ), ಕಾಮ-ಪ್ರೇಮ-ಪ್ರೀತಿಯ ಜಾಡಿನಲ್ಲಿ ಕಾವ್ಯ ಮತ್ತು ಕತೆಯನ್ನು ಪರಿಭಾವಿಸುತ್ತ ಬೆಳೆಯುತೊಡಗಿದ, ಸಮಾಜದತ್ತ ಕಣ್ಣು ನೆಟ್ಟ ಕವಿ ಈತ. ಮುಖ್ಯ ವಾಗಿ ಈ ಕವಿಯ ಕಣ್ಣು 'ನಾನು' ಎಂಬ ನವ್ಯದ ಪ್ರಧಾನ ಲಕ್ಷಣವಾದ ಆತ್ಮಾಶ್ರಯದ ಆಶಯಗಳನ್ನು ದಾಟತೊಡಗಿದ್ದು "ಲಿಲ್ಲಿ ಪುಟ್ಟಿಯ ಹಂಬಲದ" ನಂತರವೆ. ಈ ದೃಷ್ಟಿ ಯಿಂದ ಇವರ "ಶಾಂಗ್ರಿ-ಲಾ" ಸಂಕಲನ ಇವರ ಕಾವ್ಯ ಸಂದರ್ಭದಲ್ಲಿ ಮುಖ್ಯ ವಾಗುತ್ತೆ. ಅಂದಾಗ ಈ ಹಿಂದಿನ ಇವರ ಕಾವ್ಯದಲ್ಲಿ ಸಾಮಾಜಿಕ ಪ್ರಜ್ಞೆ ಕಾಣುವು ದಿಲ್ಲ ಎಂದಲ್ಲ ; ಅದು ತೆಳುವೆಂದು ಅರ್ಥವಷ್ಟೆ. ಇದು ಆ ಸಂದರ್ಭಕ್ಕೆ ಇವರ 'ಮಿತಿ'ಯೂ ಸಹ.

> "ನನ್ನ ಕಣ್ಣಿಗೆ ಕಂಡಿದ್ದು,
> ಹೃದಯಕ್ಕೆ ಮುಟ್ಟಿದ್ದು,
> ಅಷ್ಟೇ ನನ್ನ ನೈಜ ಪ್ರಪಂಚ,
> ಎಂದರೆ ಇದು ನನ್ನ ಮಿತಿ ಅನ್ನುವಿರಾ ?"
>
> (ಮಿತಿ-ಲಿಲ್ಲಿ ಪುಟಿಯ ಹಂಬಲ)

"ಹೆಣ್ಣಿನ ಸುತ್ತಲೇ ಇನ್ನೂ ಗಿರಕಿ ಹೊಡೆಯುತ್ತಿರುವ ಲಕ್ಷ್ಮಣರಾಯರ ಕಾವ್ಯದಲ್ಲಿ ಸಮಕಾಲೀನ ಆಸಕ್ತಿಗಳು ತೀರಾ ತೀರಾ ಕಡಿಮೆ. ಆದರೆ ಇವೆಲ್ಲ ಇಲ್ಲ ಎನ್ನಲಾಗುವುದಿಲ್ಲ........ ಈ ಕೊರತೆಯ ಕಾರಣಕ್ಕಾಗಿಯೇ ಇವರ ಕೆಲವು ಕವನಗಳು ಎಷ್ಟೇ ಮೆಚ್ಚುಗೆಯಾದರೂ, ಅವು ಈ ಹೊತ್ತಿನ ಮುಖ್ಯ ಕಾವ್ಯವಾಗುವುದಿಲ್ಲ...... ಆಟಕ್ಕೆ ಮೀರಿದ ಅನ್ವೇಷಣೆಯ ಗುಣವಿದ್ದಾಗ ಮಾತ್ರ ಕಾವ್ಯ ಅರ್ಥಪೂರ್ಣವಾಗುತ್ತದೆ." (ಅಮೃತ ಮತ್ತು ಗರುಡ, ಪು. 142) ಎಂಬ ಡಿ. ಆರ್. ನಾಗರಾಜರ ಮಾತುಗಳು ಮತ್ತು ಆಶಯಕ್ಕೆ ಶಾಂಗ್ರಿ–ಲಾ ಕವನ ಸಂಕಲನ ಒಂದು ಹಂತದ ಉತ್ತರ ಕೊಡುತ್ತದೆಂದು ನಂಬುತ್ತೇನೆ.

ಶಾಂಗ್ರಿ–ಲಾ ವನ್ನು ಪ್ರವೇಶಿಸುವ ಮೊದಲು ನಾವು ಈವರೆಗೆ ಲಕ್ಷ್ಮಣರಾಯರ ಕಾವ್ಯವನ್ನು ನೋಡುತ್ತ ಬಂದ ಕನ್ನಡಕವನ್ನು ಕೊಂಚ ಬದಲಾಯಿಸಿಕೊಳ್ಳಬೇಕು ಅನಿಸುತ್ತದೆ. ಕವಿಯೊಬ್ಬನ ಸಾಮಾಜಿಕ ಪ್ರಜ್ಞೆ, ಕಳಕಳಿ ಅವನ ಕಾವ್ಯದಲ್ಲಿ ಎಷ್ಟು ಸಾಂದ್ರವಾಗಿ ಅಭಿವ್ಯಕ್ತವಾಗಿದೆ ಎಂಬುದನ್ನು ನಿರ್ಣಯಿಸುವುದು ಒಂದೆಡೆಯಾದರೆ ಅವನ ಕಾವ್ಯದಲ್ಲಿ ಸಾಮಾಜಿಕ ಪ್ರಜ್ಞೆ ಇದೆಯೇ, ಇಲ್ಲವೆ? ಎನ್ನುವುದು ಪ್ರಶ್ನೆಯಿದೆ. ಕ್ರಿಯಾಶೀಲವಾಗಿರುವ ಕವಿಯೊಬ್ಬ ತನ್ನ ಸಮಕಾಲೀನ ಸ್ಥಿತಿಗತಿಗಳಿಗೆ ಹೇಗೆ ಸ್ಪಂದಿಸುತ್ತಿದ್ದಾನೆ. ತನ್ನ ಅನುಭವಗಳನ್ನು ತನ್ನ ಗ್ರಹಿಕೆಯ ಮಟ್ಟದಲ್ಲಿ ಕಲೆಯಾಗಿಸಿ ಕಾವ್ಯ ಕಟ್ಟುತ್ತಿದ್ದಾನೆ ಎಂಬುದು ನಿರ್ಣಯ ಯೋಗ್ಯ.

ಕವಿ ಅನುಭವಗಳ ಪರಕಾಯ ಪ್ರವೇಶಮಾಡಿ ಕಾವ್ಯ ಕಟ್ಟಿ ಕಲೆ ಮಾಡಬಲ್ಲ. ಆದರೆ ದೃಗ್ಗೋಚರವಾದಷ್ಟರಲ್ಲೇ, ಪರಕಾಯ ಪ್ರವೇಶ ಸಾಧ್ಯವಾಗದ್ದು–ಇದು ಒಂದು ಮಿತಿ. ಈ ಮಿತಿಯ ನಡುವೆ ಅದನ್ನು ಮೀರುವ ಪ್ರಯತ್ನದಲ್ಲಿ ಲಕ್ಷ್ಮಣರಾವ್‌ರ 'ಶಾಂಗ್ರಿ–ಲಾ' ಗಮನ ಸೆಳೆಯುತ್ತದೆ. ಮತ್ತು ತನ್ನ ಕಾವ್ಯ 'ನೈಮಿತ್ತಿಕ'ವಲ್ಲ ಎಂಬುದಕ್ಕೆ ಸಾಬೀತಾಗಿ ನಿಲ್ಲುತ್ತದೆ.

—೩—

'ಶಾಂಗ್ರಿ–ಲಾ' ಇಪ್ಪತ್ತೆರಡು ಕವನಗಳ ಸಂಕಲನ. ಸಂಕನದಲ್ಲಿನ ಗುಂಡಪ್ಪ ವಿಶ್ವನಾಥ್, ಶಾಂಗ್ರಿ–ಲಾ, ವರ್ತಮಾನ, ಕ್ರೈಕ್ನೋಟನ ಕೊನೆಯ ದಿನಗಳು, ಗೀತೆ, ಸಂಗಾತಿಯೊಂದಿಗೆ, ಕವಿತೆಗಳು ಗಂಭೀರವಾದ ಓದಿಗೆ, ಚಿಂತನೆಗೆ ತೊಡಗಿಸಿಕೊಳ್ಳುವ ಯಶಸ್ವಿ ಕವಿತೆಗಳು. ಮೂಡಿಬಂದಂತೆ ಕಾಣುವ ದೇವರಿಗೆ ನಮಸ್ಕಾರ, ಅಕಾಲ, ನರೆ ಕವಿತೆಗಳು ನಾವು ಒಪ್ಪಿಕೊಳ್ಳಲು ಬಯಸದ ಕೆಲವು ವೈಯಕ್ತಿಕ ನಿಜಗಳನ್ನು

ನಮ್ಮಲ್ಲೇ ಹುಡುಕಿಕೊಟ್ಟು, ಒಪ್ಪಿಕೊಳ್ಳುವ ಅನಿವಾರ್ಯತೆಗೆ ತಲುಪಿಸುವ ಕವನಗಳಾಗಿ ನೆನಪಲ್ಲಿ ನಿಲ್ಲುತ್ತದೆ.

'ಗೀತೆ' ಕವಿತೆಯಲ್ಲಿನ ವ್ಯಂಗ್ಯ :–

"ಹಿಂಡು ಹೀರು ತಿನ್ನು

ಕೃಷ್ಣಾರ್ಪಣವನ್ನು"

ಕವಿತೆಯ ಯಶಸ್ಸಿನ ಅಂಶವಾಗಿ ಪರಿಣಮಿಸಿದಂತೆ ; 'ಹತಾಶ' ಕವಿತೆಯಲ್ಲಿ ಹುಡುಗಟ್ಟಿರುವ ವಿಷಾದ ನಮ್ಮನ್ನು ಕಾಡುವ ಕಾರಣದಿಂದಾಗಿ ಉಳಿದುಕೊಳ್ಳುವ ಪ್ರಯತ್ನದಲ್ಲಿ ಸಫಲವಾಗುತ್ತದೆ.

'ಸ್ಯಮಂತಕ' ನಿರೂಪಣೆಯ ಧಾಟಿಯ ಕವಿತೆ. ವಸ್ತುವಿನ ನಿರೂಪಣೆಗೆ ನಿರೂಪಕನನ್ನು ಪೂರ್ತ ಅವಲಂಬಿಸಿರುವುದನ್ನು ಇಲ್ಲಿ ಕಾಣಬಹುದು. ಹಾಗಾಗಿ ಕವಿತೆಯ ಧ್ವನಿ ಪ್ರಧಾನವಾಗದೆ ನಿರೂಪಕನ ಧ್ವನಿಯೆ ಇಡೀ ಕವಿತೆಯನ್ನು ಆವರಿಸಿದಂತೆ ತೋರುತ್ತವೆ. ಈ ತಂತ್ರ ಆ ಕವಿತೆಯ ಹರವಿಗೆ ಸ್ವಲ್ಪ ಕುಂದುಂಟುಮಾಡಿದಂತೆ ಭಾಸವಾಗುತ್ತದೆ. ಆದರೂ ವಿಷಯ ಸಂವಹನ ದೃಷ್ಟಿಯಿಂದ ಪ್ರಯತ್ನ ಫಲಕಾರಿಯೆ, ವೈಯಕ್ತಿಕ ತುಡಿತಗಳೊಂದಿಗೆಯೆ ತನ್ನ ಪರಿಸರದ ಸಾಮಾಜಿಕ ರಾಜಕೀಯ ಬದುಕಿಗೆ ನೇರ ಮುಖಾ ಮುಖಿಯಾಗುವ ಪ್ರಯತ್ನಗಳನ್ನು 'ವರ್ತಮಾನ' 'ಗೀತೆ', ಕವಿತೆಗಳಲ್ಲಿ ಕಾಣಬಹುದು.

"ಈ ವಾರದ ಪುರವಣಿಯಲ್ಲಿ ನನ್ನದೆ ಪದ್ಯ,

ಅದು ಯಾರಿಗಾದರೂ ಅರ್ಥವಾದೀತೋ!

ಅನುಮಾನ. ನನ್ನ ಅಂಕೆ ಮೀರಿ ಮೂಡಿರುವ

ಆ ಭಾವ ವಿಚಾರ ಗೊಂದಲಗಳಿಗೆ ಅರ್ಥ

ನಾನೇ ಇನ್ನೂ ಕಂಡುಕೊಳ್ಳಬೇಕಾಗಿದೆ"

'ವರ್ತಮಾನದ'ದ ಹಲವು ಹತ್ತು ಗೊಂದಲ, ಗೋಜಿನಲ್ಲಿ ತಾನು, ತನ್ನ ಕೃತಿಯೂ ಅದನ್ನ ಒಪ್ಪಿಬಿಡುವುದು "ಐರನಿ" ತಾನೆ.

"ಏನು ಮಾಡಲು ಕೈಸಾಗದೆ ಈತ

ನ್ಯೆಚೆಲ್ಲಿ ಬಿದ್ದಿದ್ದಾನೆ ಅಂಗಾತ" (ಹತಾಶ)

ಎನ್ನುವಲ್ಲಿನ ಹತಾಶಭಾವ, ಸಮಾಜದ ಬಾಹ್ಯ ಹಿಂಸೆಯನ್ನು ಕಂಡಾಗ ಆವರಿಸುವ ಮನೋಸ್ಥಿತಿ. ಆದರೆ ಕ್ರಿಯಾವಂತನೂ, ಸೃಜನಶೀಲನೂ ಆಗಿರುವ ಕವಿಯಲ್ಲಿ ಅದು ಸ್ಥಿರವಾಗಿ ನಿಲ್ಲುವುದಿಲ್ಲ. ಆದ್ದರಿಂದಲೆ–

"ಕಾಯುವುದು ಕಷ್ಟ ; ಅನಿವಾರ್ಯ"

ಎಂಬ ಸಿದ್ಧಾಂತಕ್ಕೆ ತಲುಪಿ ಕಾಯಬೇಕಾಗುತ್ತದೆ. ಹಾಗೆ ಕಾದುದ್ದರ ಪರಿಣಾಮ–

"ಜೋಪಡಿಯಲಿ ಜೋಗುಳ ಅಂಗಳದಲ್ಲಿ ಹೂಹಸೆ
ಚಿಂದಿಯಲ್ಲಿ ಹಿಗ್ಗು ಹರೆಯ ಉಬ್ಬು ನಿಗುರು ಸೊನೆ
ಹಟ್ಟಿಯಲಿ ಗಬ್ಬ ಹಬ್ಬ ಅಜ್ಜ ಮೂಗು ನಗೆ
..........................
ಬಚ್ಚಲಲಿ ಬಾಲಮುರಳಿ ಸಂತೆಯಲ್ಲಿ ಬೇಂದ್ರೆ"

(ಗುಂಡಪ್ಪ ವಿಶ್ವನಾಥ್)

ಕಾಣಲು ಸಾಧ್ಯವಾಗುವುದು. ಕಮರ್ಷಿಯಲ್ ಆದ, ಕಸುವನ್ನು ಕಳಕೊಂಡ ಕಲೆಯ ಮಾಂತ್ರಿಕತೆ ಮತ್ತೆ ಶಕ್ತವಾಗಲು ಸಾಧ್ಯವಾಗುವುದು.

ಲಕ್ಷ್ಮಣರಾಯರ ಗೋಪಿ ಮತ್ತು ಗಾಂಡಲೀನ, ಫೋಟೋಗ್ರಾಫರ್, ಟುವಟಾರ ದಂತಹ ಅತ್ಯುತ್ತಮ ಯಶಸ್ವಿ ಕವನಗಳ ಶ್ರೇಣಿಯಲ್ಲಿ ನಿಲ್ಲುವಂಥ ಕವನ 'ಗುಂಡಪ್ಪ ವಿಶ್ವನಾಥ್'. ಇದು ಸಂಕಲನದ ಅತ್ಯುತ್ತಮ ಕವಿತೆಗಳಲ್ಲೊಂದು. ಇವರ ಬಹು ತೇಕ ಕವಿತೆಗಳಲ್ಲಿ ಕಾಣಿಸಿಕೊಳ್ಳುವ ವಿಷಾದ ಇಲ್ಲೂ ಕಾಣಿಸಿಕೊಳ್ಳುತ್ತದೆ. ಕಲಾತ್ಮಕ ವಾಗಿದ್ದ ವಿಶ್ವನಾಥನ ಆಟ ಕಮರ್ಷಿಯಲ್ ಪಲಿಯದ ಬಲಿಗೆ ಸಿಕ್ಕು ಪೇಲವವಾದುದು ಕವಿಯಲ್ಲಿ ವಿಷಾದಭಾವ ತುಂಬಿದೆ. ಇಷ್ಟಕ್ಕೆ ಕವಿತೆ ಸೀಮಿತಗೊಳ್ಳದೆ ಒಟ್ಟಾರೆ ಕಲಾ ಜಗತ್ತಿಗೆ ಒದಗಿದ ದುಸ್ಥಿತಿಗೆ ಕೈಗನ್ನಡಿಯಾಗಿ ಮತ್ತೆ ಕಲೆ ಹೊಸ ರಕ್ತಮಾಂಸಗಳಿಂದ ಜೀವ ತುಂಬಿ ನಿಲ್ಲುವುದು ; ವಿಶ್ವನಾಥನಂಥ ನೈಜ ಕಲಾವಿದರು ಭವಿಷ್ಯದಲ್ಲಿ ಬರು ತ್ತಾರೆ ಎಂಬ ಆಶಯವನ್ನು ಧ್ವನಿಸುತ್ತದೆ. ಸಾಮಾಜಿಕ ಮತ್ತು ಆತ್ಮಾವಲೋಕನದ ನಡುವಿನ ತಿಕ್ಕಾಟವನ್ನು ಏಕತ್ರಗೊಳಿಸುವ ಕ್ರಿಯೆಯಿಂದಾಗಿ ಗುಂಡಪ್ಪ ವಿಶ್ವನಾಥ್ ಕವಿತೆ ತನ್ನದೆ ಆದ ವಿಶಿಷ್ಟ ಯಶಸ್ಸನ್ನು ಪಡೆದು, ವಿಮರ್ಶಕನ ಓದುಗನ ನಿರೀಕ್ಷೆ ಮುಟ್ಟುತ್ತದೆ.

ಕ್ರಿಕೆಟ್ಟಿಗನ ಕೊನೆಯ ದಿನಗಳು ಕವಿತೆ ಭ್ರಮನಿರಸನಗೊಂಡ ಹುಚ್ಚು ಸಾಹಸಿ ಒಬ್ಬನ ಆತ್ಮಾವಲೋಕನದಂತೆ ತೋರುತ್ತದೆ. ಇಲ್ಲಿನ ಭಾವ ತೀವ್ರತೆ ಕ್ರಿಕೆಟಿಗನದು

ಮಾತ್ರವಾಗದೆ ಕವಿಯದು, ಎಲ್ಲರದೂ ಆಗಲು ಸಾಧ್ಯವಿದೆ ಎಂದು "ಚರಿತ್ರೆ ವ್ಯಕ್ತಿಗಳಿಂದ ಆಗದಕ್ಕದ್ದಲ್ಲ ಎಲ್ಲರೂ ಚರಿತ್ರೆಯ ಗುಲಾಮರು" ಎಂಬ ಟಾಲಸ್ಟಾಯ್‌ರ ಅಭಿಪ್ರಾಯವನ್ನು ಒಪ್ಪಿಬಿಡುವುದು ಕವಿಯ ಸಿನಿಕತನವೆ ಅಥವಾ ಐರನಿಯೆ ಎಂಬ ಯಾವುದಾದರೂ ಒಂದು ನಿಲುವಿಗೆ ಬರುವುದು ಕಷ್ಟವೆನಿಸುವುದು ನನ್ನ ಗ್ರಹಿಕೆಯ ಮಿತಿಯೂ ಇದ್ದೀತು.

—೪—

ಲಕ್ಷ್ಮಣರಾವ್ ಅಪರೂಪಕ್ಕೊಮ್ಮೆ ಗಂಭೀರ ಸನ್ನಿವೇಶದ ನಡುವೆ ಲೇವಡಿತನವನ್ನು ಮೆರೆಸುವ ಪ್ರಯತ್ನಮಾಡುವುದು ಏಕೆಂಬ ಪ್ರಶ್ನೆ ಕಾಡುತ್ತದೆ. ಉದಾ : 'ವರ್ತಮಾನ' ಕವಿತೆಯಲ್ಲಿ ಅತ್ಯಾಚಾರ ಕೊಲೆಗಳಂಥ ಧಾರುಣ ಸನ್ನಿವೇಶದ ಚಿತ್ರಕೊಡುತ್ತ

"ಈ ಬೆತ್ತಲೆ ಹೆಣ್ಣು
ವಿಶ್ವ ಸುಂದರಿಯಲ್ಲ, ಅಕ್ಕನಲ್ಲ, ಈ ನತದೃಷ್ಟೆ
ಗಾಂಚಾಲಿ ಮಾಡಿದ ಪಾಂಚಾಲಿ, ನಡುಬೀದಿಯಲ್ಲಿ
ಆರಕ್ಷಕರಿಂದ ವಸ್ತ್ರಾಪಹರಣವಾಗಿದೆ, ಅಷ್ಟೆ".

ಇಲ್ಲಿನ 'ಗಾಂಚಾಲಿ' 'ಪಾಂಚಾಲಿ' ಪ್ರಾಸದ ದೃಷ್ಟಿಯಿಂದ ಪ್ರಯೋಗಗೊಂಡಿದೆ ಅಂದುಕೊಂಡರೂ ಸಂದರ್ಭದ ಗಾಂಭೀರ್ಯಕ್ಕೆ ದಕ್ಕೆ ತರುತ್ತದೆ.

—೫—

ಶಾಂಗ್ರಿ–ಲಾ ಕವನ ಸಂಕಲನ ಲಕ್ಷ್ಮಣರಾವ್‌ರ ಹಿಂದಿನ ಕವನ ಸಂಕಲನಗಳಿಗಿಂತ ಭಿನ್ನತೆಯನ್ನು ಕಾಣಿಸುವ ಸಂಕಲನ. ಹೆಣ್ಣು, ಕಾಮ, ಪ್ರೇಮಗಳ ನಡುವೆ ತನ್ನನ್ನು ಕಾಡುವ ಸಾವು ಮತ್ತು ವಿಷಾದಗಳನ್ನು ಧ್ವನಿಸುತ್ತಿದ್ದ ಇವರ ಕಾವ್ಯ ಇಂದು ಅವನ್ನು ಬೇಡುತ್ತ, ಅವನ್ನು ಮೀರಿದ ಬದುಕನ್ನು ಹುಡುಕುವ ಪ್ರಯತ್ನ ಮಾಡುತ್ತದೆ. ವೈಯಕ್ತಿಕ ತೀವ್ರತೆಯನ್ನು ದಾಟಿ, ಸಾಮಾಜಿಕ ಅವಲೋಕನದತ್ತ ಮುಖ ಮಾಡಿರುವುದನ್ನು ಕಾಣಿಸುತ್ತದೆ.

ಈ ಸಂಕಲನ ಈ ಕವಿಯ ಬೆಳೆಯುತ್ತ ಹೊರಟ ಅನುಭವಗಳ, ಸಾಮಾಜಿಕ ಕಳಕಳಿಯೊಂದಿಗಿನ ಹುಡುಕಾಟಗಳ, ಗ್ರಹಿಕೆ ಮತ್ತು ಕಾವ್ಯ ಕಲೆಯ ನಿರ್ಮಾಣ ವಿನ್ಯಾಸಗಳನ್ನು ಗುರುತು ಮಾಡುವಂಥ ಮುಖ್ಯ ಸಂಗತಿಗಳ ಅಧ್ಯಯನಕ್ಕೆ ನಿಲ್ಲುವ ಕೃತಿ. ○

# ತಮಸಾನದಿಯ ತೀರದಲ್ಲಿ

-ಪ್ರೊ॥ ಜಿ. ಎಸ್. ಸಿದ್ಧಲಿಂಗಯ್ಯ

ಈಗಲೂ ಅಮಾವಾಸ್ಯೆಯಿರುಳುಗಳಲ್ಲಿ
ನಕ್ಷತ್ರಗಳು ಈ ಹೊಳೆಗೆ ಧುಮುಕಿ
ಮಿಣಿ ಮಿಣಿ ಮಿಣಿಗಿ ಕೆಣಕುತ್ತವೆ
ನಿಗಿನಿಗಿ ಉರಿಯುತ್ತವೆ ನೆನಪು.
ಹರೆಯವುಕ್ಕುವ ಋಷಿಕನ್ಯೆ
ಹೊಳೆಯಲ್ಲಿಳಿದು
ಹೊಳೆತುಂಬ ತಾವರೆಯಾಗಿ
(ತನ್ನ ರೂಪಿಗೆ ತಾನು ಮೈಮರೆತು)
ತೇಲುತ್ತಿರಲು
ಕೊಬ್ಬಿ ನುಗ್ಗಿದ ಕಿರೀಟ ತಾನೊಬ್ಬ
ಗೂಳಿಹಾಗೇ
ಬೆದರುತೋಡೋಡಿ ಹುಡುಗಿ ಕಿರುಚಾಡಿದ್ದು
ಋಷಿಯೊಬ್ಬನಿದಿರಾಗಿ
ಕಾಡುನಾಡುಗಳು ತೊಂಡುದೊರೆಯೊಡನೆ
ಕಿಚ್ಚಿಡ್ದುರಿದು
ಕನ್ಯೆ ಬಚಾವಾಗಿ
ಹಿಗ್ಗಿನ ಕಣ್ಣೀರೇ
ಹೊಳೆಯಾಗಿ ಹರಿದದ್ದು
ಎಡಕ್ಕೊಂದು ಬಲಕ್ಕೊಂದು ಇರುವ
ದಡಗಳೆರಡರಲ್ಲೂ
ಮತ್ತೆ ರಾಕ್ಷಸರು ದೇವತೆಗಳೆದ್ದಿದ್ದು
ಗುದ್ದಾಡಿದ ಕಥೆ ಚಿಗುರಿ
ಬದುಕಿನ ರಹಸ್ಯಗಳನ್ನೆಲ್ಲ ಕೆಣಕಿದ್ದು
ಎಂಥ ಕಣಸುಗಳು ಅವು !
ತಮಸೆಯೊಡಲಲ್ಲಿ ಬೆಳಕಿನ ಬೀಜಗಳೇಳುವುವು ಆಗಾಗ
ಹುತ್ತಗಟ್ಟಿದ ಋಷಿಯು ನೋಡಿದ

ಮಿಥುನವನು ಮತ್ತೆ
ಮಡದಿಯು ಬಿಡಿಸಿ ಬೀಗಿದ ಧೀರ
ಹೆಂಡಿರ ಕಾಡು ಪಾಲಾಗಿಸಿದ್ದು
ಕಣ್ಣೀರಿನಲಿ ಮಿಂದ ಮಣ್ಣಿನ ಮಗಳ ಸಂತೈಸಿ
ಮಕ್ಕಳಿಬ್ಬರನು ಬೆಳಸಿ ಸಿಂಹಗಳ ಹಾಗೆ ಪಳಗಿಸಿ
ಮತ್ತೆ ತಂದೆಗೆ ಕೈಯೆಡೆಯಿತ್ತು
ಗಂಡು ಹೆಣ್ಣಿನ ಮಧ್ಯೆ ತೊಡಕುವ
ತೊಂಡುತನದ ಕಥೆಗೆ ಕೊನೆ ಹಾಡಬಯಸಿದ್ದು
ಈ ರಾಮಾಯಣಕ್ಕೆ ನಮಸ್ಕಾರ
ಓ ತಮಸಾ ನದಿಯೆ ನಿನಗೆ

## ಆ ಹುಡುಗಿ ಹೇಳಿದ್ದು

–ಎಲ್. ಎಸ್. ಮುಕುಂದರಾಜ್

ಆ ಹುಡುಗಿ ಹೇಳಿದ್ದು ;
ನೀನು ಹಕ್ಕಿಯಾಗು
ನಾನದರ ರೆಕ್ಕೆಯಾಗುತೇನೆ;

ನೀನು ಕಣ್ಣಾಗು
ನಾನದರ ಕನಸಾಗುತೇನೆ;

ನೀನು ಎದೆಯಾಗು
ಅದರೊಳಗಿನ ಮಿಡಿತ ನಾನಾಗುತೇನೆ;

ನೀನು ಕಡಲಾಗು
ನಾನು ಉಪ್ಪಾಗುತೇನೆ;

ನೀನು ತುಟಿಯಾಗು
ನಾನು ನಗುವಾಗುತೇನೆ;

ಹಂ !
ನಾನೆಲ್ಲವೂ ಆದೆ;
ಅವಳೇನೂ ಆಗಲಿಲ್ಲ !

# ಇಂದು-ನಾಳೆಗಳ ನಡುವೆ

–ನಜೀರ ಚಂದಾವರ, ಶಿರಸಿ

ಇಂದು ಹುಡುಕುತ್ತೇನೆ
ಭೂಮಿ–ಆಕಾಶಗಳ ನಡುವೆ;
ನಾಳೆ ನಾನು ಬರೆಯುತ್ತೇನೆ
ಮಣ್ಣು–ಮುಗಿಲುಗಳ ನಡುವೆ.

ಇಂದು ಬೆರೆತಿದ್ದೇನೆ
ನೆರಳು–ನಿಟ್ಟುಸಿರುಗಳ ನಡುವೆ;
ನಾಳೆ ಮರೆಯುತ್ತೇನೆ
ಬಿಸಿಲು–ಬೆಳದಿಂಗಳ ನಡುವೆ.

ಇಂದು ನಡೆದಿದ್ದೇನೆ
ಇತಿಹಾಸ–ಅಟ್ಟಹಾಸಗಳ ನಡುವೆ ;
ನಾಳೆ ನಾನು ಆಗುತ್ತೇನೆ
ರೋಷ–ದೋಷಗಳ ನಡುವೆ.

ಇಂದು ಬದುಕಿದ್ದೇನೆ
ಹೆಣ–ಹದ್ದುಗಳ ನಡುವೆ ;
ನಾಳೆ ನಾನು ನೋಡುತ್ತೇನೆ
ಗೋರಿ–ಕೋವಿಗಳ ನಡುವೆ.

ಇಂದು ಯೋಚಿಸುತ್ತೇನೆ
ನೆನಪು–ನೋವುಗಳ ನಡುವೆ ;
ನಾಳೆ ಸತ್ತಿರುತ್ತೇನೆ
ಹಿಡಿಮಣ್ಣು–ಮುಷ್ಟಿ ಬೂದಿ ನಡುವೆ.

ಗೆಳೆಯರೇ
ಇಲ್ಲಿ, ಇಂದು–ನಾಳೆ ಬದಲಾಗುವುದಿಲ್ಲ
ದೇವರು–ದೆವ್ವಗಳ ನಡುವೆ
ಅಸ್ತಿತ್ವ–ಆಹ್ವಾನಗಳ ನಡುವೆ.

## ನೋಡಿದೆಯಾ ?

ಗುಬ್ಬಿ ;
ನೀನು ಕೊಬ್ಬಿ
ಕಡ್ಡಿನಾರುಗಳ ಕೊಂಡೊಯ್ದು
ಗೂಡುಕಟ್ಟಿ
ಎಲ್ಲ ಮರಿಗಳಿಗೆ ಗುಟುಕು ಕೊಟ್ಟೆ
ನೋಡಿದೆಯಾ, ನಿನ್ನಮೊಟ್ಟೆ ಒಡೆದು
ಲೊಟ್ಟೆ ಎಂದು
ಟಾಟಾ ಮಾಡದೆ ಓಡಿದ್ದು ?

## ಗುಲಾಬಿಗೆ

ಗೆಳತಿ ನೀನು ಅಕ್ಕರೆಯಿಂದ ಕೊಟ್ಟ
ಪೆನ್ನಿನಲ್ಲಿ ಬರೆದೆ ನೂರು ಕವಿತೆ
ನಿನ್ನ ನಿರ್ಮಲ ಗೀತೆ ಅಚ್ಚಾಗಿತ್ತು ಹೃದಯದಲ್ಲಿ
ಹಾರೈಸುವೆ ಗೆಳತಿ ನಿನಗೆ
ನುಚ್ಚಾಗಲಿ ಬಾಳನೋವು
ಕಾವ್ಯವಾಗಿ ಹಾಳೆ ಪೆನ್ನು

## ಹಾರೈಕೆ

ಮುಳ್ಳಿನ ಬೇಲಿಯಲ್ಲಿ
ನರಳಿ ಅರಳುವ
ಬೇರೊಬ್ಬರ ಮುಡಿಯ
ಸಿಂಗರಿಸಿ ಬಾಡುವ
ನಿನ್ನ ಬದುಕಿನ ಪರಿ
ಎಲ್ಲ ಜೀವಿಗಳ
ನೋವ ಕಾದಂಬರಿ

—ಸಂಧ್ಯಾ ಲಕ್ಷ್ಮೀಕಾಂತ್

## ನಕ್ಕುಬಿಡೆ !

–ವಿದ್ಯಾ ಭರತನಹಳ್ಳಿ

ಎಲ್ಲಿ ಅಡಗಿರಬಹುದು ಹೇಳೇ
ಕವಿಯಂಥವನು
ಮುಸುಕು ಮುಂಜಾವಿನಲಿ ರೇಷ್ಮೆಯಂತೆ
ಮೃದುವಾಗಿ ಚೀಲದಲಿ ತುಂಬಿ
ಕನಸುಗಳ ಕೊಟ್ಟುಹೋದವನು ?

ಕಿಟಕಿಯಾಚೆಯ ಲೋಕ ಬೇರೆಯೇ
ಇರಬಹುದು–ಅಲ್ಲೂ ಹನಿ ಜಿನುಗಿಸಬಹುದು
ಗರಿಕೆ ಬೇರುಗಳ ತರಚಬಹುದು
ಒಳಗೊಳಗೆ ಕೊರೆವಂಥ ಶಾಖ ನೋಡೇ........

ರಮ್ಯ ರೋಮಾಂಚನವಿರಬಹುದು
ಅಲ್ಲೇ ಆಚೆ ಕೂಡಿ ಕಾಡುತಿರಬಹುದು
ಮಿಥುನ ಪಕ್ಷಿಗಳ ಹಾಗೆ
ಕಾಣದಿದ್ದರೆ ಗೋಳುಗುಡಬೇಡ
ಗಾಳಿ ಬಂದಂತೆ ತೂರಿ ಹೋಗುವ
ಹಗುರ ನೀರಿನಲಿ ಇಳಿವವ
–ನ ಕಂಡು ನಕ್ಕುಬಿಡೆ ?
ಮಂದಾರ ಹೂವಿನ ನಗೆಯ.

## ಮುತ್ತಿನಲಿ... ?

ಹಾರುವ ಹಕ್ಕಿ ಚಲಿಸುವ ಮೋಡ
ರಂಗು ಚೆಲ್ಲಿದ ಬಾನು
ಚೈತ್ರದ ಹಾಡು ನಕ್ಕ ಹೂವು
ನಿನ್ನ ತುಟಿಯಲಿ ಅರಳಿದ
ನನ್ನ ಮುತ್ತಿನಲಿ ಕಂಡೆ

–ಎಸ್.ಜಿ. ಸ್ವಾಮಿ
('ವಿದಾಯ' ಸಂಕಲನದಿಂದ)

# ದಲಿತ ಬಂಡಾಯದ ಸಾಮಾಜಿಕ ನಿಲುವು*

–ಡಾ॥ ಮನಜ

ನಮ್ಮದ ಸೋಲುಗಳನ್ನು ಸಾರಿ ಹೇಳುವುದಕ್ಕಿಂತ, ಅಥವಾ ಅದರ ಮಿತಿಗಳನ್ನು ಪಟ್ಟಿ ಮಾಡುವ ವಿಮರ್ಶೆ ಕೇವಲ ಚರ್ವಿತಚರ್ವಣ ಎನಿಸಿಬಿಡಬಹುದಾದ ಸಂಭವಗಳೇ ಬಹಳವಿರುವುದರಿಂದ ನಮ್ಮೋತ್ತರವೂ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಸಮಕಾಲೀನ ವಾಗಿ ಮಾತ್ರವಲ್ಲದೆ ನಿರಂತರವಾಗಿ ಪ್ರಸ್ತುತವೂ ಎನಿಸುವ ದಲಿತ, ಬಂಡಾಯ ಸಾಹಿತ್ಯವನ್ನು ಕುರಿತು ಅನ್ಯ ಮಾತುಗಳಲ್ಲಿ ವಿಚಾರ ಮಾಡುವುದೇ ಬಹುಶಃ ಹೆಚ್ಚು ಪ್ರಯೋಜನಕಾರಿಯಾದ ಯತ್ನವಾದೀತೆಂದು ತೋರುತ್ತದೆ. ಅಥವಾ, ವಿಷಯವನ್ನೇ ನೇರವಾಗಿ ಮುಟ್ಟುವುದಾದರೆ ವೈಚಾರಿಕವಾಗಿ ಅತ್ಯಂತ ಪ್ರಖರವೂ ಸಮಕಾಲೀನವಾಗಿ ತೀರಾ ಅನಿವಾರ್ಯವೂ ಆದ ಬಹು ದೊಡ್ಡ ಸಾಮಾಜಿಕ ಒತ್ತಡಗಳಿಗೆ ಒಳಗಾಗಿರುವ ನಮ್ಮ ಸಾಮಾಜಿಕ ಹಾಗೂ ಸಾಂಸ್ಕೃತಿಕ ಮೌಲ್ಯಗಳ ಹಿನ್ನೆಲೆಯಲ್ಲಿ, ಪ್ರಸಕ್ತ ದಲಿತ ಬಂಡಾಯ ಸಾಹಿತ್ಯದ ಒಟ್ಟು ಧೋರಣೆಯನ್ನು ಒಂದು ತಾತ್ವಿಕ ಜಿಜ್ಞಾಸೆಗೆ ಅಳವಡಿ ಸುವುದೇ ಸೂಕ್ತವೆಂದು ತೋರುತ್ತದೆ. ಅದರಲ್ಲೂ, ದಲಿತಬಂಡಾಯ ಸಾಹಿತ್ಯದ ಸಾಮಾಜಿಕ ನಿಲುವನ್ನು ಕುರಿತು ವಿಚಾರ ಮಾಡುವಾಗ, ಅತ್ಯಂತ ಮುಖ್ಯವಾದ ಒಂದು ವಿಚಾರವಂತೂ ವಿಮರ್ಶಕನ ನೆನಪಿನಾಚೆ ಉಳಿಯಲು ಸಾಧ್ಯವಿರುವಂತಿಲ್ಲ. ಅದೆಂದರೆ, ನಮ್ಮ ಸಾಹಿತ್ಯದ ವಸ್ತು ಇಷ್ಟೊಂದು ವೈವಿಧ್ಯಮಯವಾದ ಸಂವೇದನೆ ಹಾಗೂ ಜೀವನಾನುಭವವನ್ನು ಪಡೆದುದಾಗಲಿ, ತಾತ್ವಿಕವಾಗಿ ಇಷ್ಟೊಂದು ವೈವಿಧ್ಯ ವೆನಿಸುವ ವಿಚಾರಧಾರೆಗಳ ಭೂಮಿಕೆಯ ಮೇಲೆ, ಸೃಜನಶೀಲ ಸಾಹಿತ್ಯದ ಕ್ರಿಯೆ ಒಂದು ರೀತಿಯ ಸಾಮಾಜೀಕರಣಕ್ಕೊಳಗಾಗಿ ಈ ಪ್ರಮಾಣದಲ್ಲಿ ನಡೆದುದಾಗಲಿ, ವಚನಕಾರರ ನಂತರ ಚರಿತ್ರೆಯಲ್ಲಿನ ಒಂದೇ ಒಂದು ನಿದರ್ಶನವೆಂದರೆ, ಪ್ರಾಯಶಃ ದಲಿತ ಬಂಡಾಯ ಮಾತ್ರ ಎಂದಾಗ, ಯಾರೂ ವಿಕ್ಷಿಪ್ತಗೊಳ್ಳಲು ಕಾರಣವಿದ್ದಂತಿಲ್ಲ. ಹಾಗೆಯೇ ಈ ಸಂದರ್ಭದಲ್ಲಿ ವಚನಕಾರರನ್ನು ಉಲ್ಲೇಖಿಸಿದ ಕೂಡಲೇ ಅವರಿಗಿದ್ದ ಗಂಭೀರ ಮಿತಿಗಳ ನೆನಪು ಕೂಡಾ ಈ ಮಾತಿನ ಹಿಂದೆಯೇ ಇರುತ್ತದೆ.

ಮೊದಲಿಗೆ ದಲಿತ ಬಂಡಾಯ ಸಾಹಿತ್ಯದ ಸಾಮಾಜಿಕ ನಿಲುವು ಹಾಗೂ ಅದರ ಧೋರಣೆಯ ಸ್ವರೂಪವನ್ನು ಕುರಿತ ಹಿರಿಯ ಸಾಹಿತಿ ಪ್ರೊ. ಜಿ.ಎಸ್. ಶಿವರುದ್ರಪ್ಪ

* ತಾ. 26–27 ಮಾರ್ಚ್ 88ರಂದು ಕರ್ನಾಟಕ ಸಾಹಿತ್ಯ ಅಕಾಡೆಮಿ ವತಿಯಿಂದ ತುಮಕೂರಿನಲ್ಲಿ ನಡೆದ "ಸಾಹಿತ್ಯ ಮತ್ತು ಸಾಮಾಜಿಕ ನಿಲುವುಗಳು" ಎಂಬ ಸಂಕಿರಣದಲ್ಲಿ ಮಂಡಿಸಲಾದ ಪ್ರಬಂಧ

ನವರ ಒಂದು ಅಭಿಪ್ರಾಯ ಈ ಸಂದರ್ಭದಲ್ಲಿ ಉಲ್ಲೇಖನೀಯ ಎಂದು ತೋರುತ್ತದೆ. "ನನ್ನ ಮಟ್ಟಿಗೆ ಹೇಳುವುದಾದರೆ ಬಂಡಾಯ ಅನ್ನುವುದೊಂದು ಮನೋಧರ್ಮ. ಈ ಮನೋಧರ್ಮದ ಮುಖ್ಯ ಲಕ್ಷಣ ಸಾಮಾಜಿಕ ಅಸಮಾನತೆ ಹಾಗೂ ಅನ್ಯಾಯ ಗಳನ್ನು, ಒಟ್ಟಾರೆಯಾಗಿ ವಸ್ತುಸ್ಥಿತಿಯನ್ನು ಪ್ರಶ್ನಿಸುವ ಮತ್ತು ಪರಿಸ್ಥಿತಿಯನ್ನು ಬದಲಾಯಿಸುವ ಉದ್ದೇಶದಿಂದ ಪ್ರತಿಭಟಿಸುವ ಒಂದು ಪ್ರವೃತ್ತಿ........ಶತಮಾನಗಳ ಕಾಲ ಅಕ್ಷರಜ್ಞಾನದ ಸವಲತ್ತುಗಳಿಂದ ವಂಚಿತನಾದ್ದು ಮತ್ತು ಮೇಲಿನ ಎಲ್ಲ ವರ್ಗದ ವರುಗಳಿಂದ ತುಳಿತಕ್ಕೆ ಒಳಗಾಗಿದ್ದ ಸಮಾಜದ ಕೆಳಗಿನ ಸ್ತರವೊಂದು, ಮಾತನಾಡಲು ಕಲಿತು, ತನ್ನ ಪ್ರತಿಭಟನೆಯನ್ನು ಅಭಿವ್ಯಕ್ತಪಡಿಸತೊಡಗಿದಾಗ ಮೂಡಿ ಬಂದಿತು ಸಾಹಿತ್ಯ.... .. ಹಿಂದಿನ ಎಲ್ಲ ಸಾಹಿತ್ಯ ಚಳುವಳಿಗಳೂ ತಮ್ಮ ತೆಕ್ಕೆಗೆ ತೆಗೆದುಕೊಳ್ಳದೆ ಹೋದ ಸಮಾಜದ ಕೆಳವರ್ಗದವರ ಬದುಕನ್ನು, ನಿರ್ಲಕ್ಷಿತರ ಬದುಕನ್ನು ಬಂಡಾಯ ಸಾಹಿತ್ಯ ತನ್ನ ವಸ್ತುವನ್ನಾಗಿ ಮಾಡಿಕೊಂಡಿವೆ"[1] ಬಹುಶಃ ಈ ಅಭಿಪ್ರಾಯದ ಯಥಾರ್ಥತೆಯನ್ನು ಸ್ವತಃ ದಲಿತ ಬಂಡಾಯ ಸಾಹಿತ್ಯದಲ್ಲೇ ಕಾಣಲೆತ್ನಿಸುವುದು ಸೂಕ್ತವೆಂದು ತೋರುತ್ತದೆ.

ಇನ್ನು ಈ ಮುಂದಿನ ಒಂದೇ ಒಂದು ಮಾತನ್ನು ಉದ್ಧರಿಸಿ, ನೇರವಾಗಿ ದಲಿತ ಬಂಡಾಯ ಸಾಹಿತ್ಯವನ್ನೇ ಪ್ರವೇಶಿಸಬಹುದೆಂದು ತೋರುತ್ತದೆ : ದಲಿತ ಬಂಡಾಯದ ಸಾಮಾಜಿಕ ನಿಲುವನ್ನು ಕುರಿತು ಅದರ ಪ್ರಣಾಳಿಕೆಯಲ್ಲಿ ಕೂಡಾ ಹೀಗೆ ಹೇಳಲಾಗಿದೆ : "ಶೋಷಿತರೂ ಶ್ರಮಿಕರೂ ಆದ ಜನತೆಯ ಪರವಾದ ನಿಲುವುಗಳನ್ನು ಸಾಂಸ್ಕೃತಿಕ ಕ್ಷೇತ್ರದಲ್ಲಿ ಭದ್ರವಾಗಿ ನೆಲೆಗೊಳಿಸುವುದೇ ದಲಿತ ಬಂಡಾಯ ಸಾಹಿತ್ಯ ಚಳುವಳಿಯ ಮುಖ್ಯ ಗುರಿಯಾಗಿದೆ." ಅಂತೆಯೇ ಬಂಡಾಯ ಸಾಹಿತ್ಯ ಸಂಘಟನೆಯ ಪ್ರಣಾಳಿಕೆಯಲ್ಲಿ ಅದರ ನೆಲೆಯನ್ನು ಕುರಿತು ಹೀಗೆ ಹೇಳಲಾಗಿದೆ ; "ಸಾಹಿತಿಗೆ ಸಾಮಾಜಿಕ ರಾಜಕೀಯ ಪ್ರಜ್ಞೆ ಇರಬೇಕೆಂಬ ಆಶಯ ಇಲ್ಲಿ ಮುಖ್ಯವಾದದ್ದು. ಅಸ್ಪೃಶ್ಯತೆ ಜಾತಿ ಪದ್ಧತಿ ಮತ್ತು ಲಿಂಗಭೇದ ನೀತಿಯ ವಿರುದ್ಧ ಹೋರಾಟವನ್ನು ಕಟ್ಟುವುದು ನಮ್ಮ ಮುಖ್ಯ ಉದ್ದೇಶಗಳಲ್ಲಿ ಒಂದು. ಎಲ್ಲ ಜನಪರ ನಿಲುವುಗಳಿಗೆ ಬೆಂಬಲ, ಜನಪರವಾದ ಸಾಂಸ್ಕೃತಿಕ ಹೋರಾಟ ನಮ್ಮ ನೆಲೆ. ಇಂಥ ಒಲವಿನ ಸಾಹಿತ್ಯ ಸೃಷ್ಟಿ ಹೋರಾಟದ ಮುಖ್ಯ ದಾಖಲೆ". ಬಂಡಾಯ ಸಾಹಿತ್ಯ ಹಾಗೂ ದಲಿತರು ಎಂಬ ಪದಗಳಿಗೆ ಈ ಪ್ರಣಾಳಿಕೆಯಲ್ಲಿ ಹೀಗೆ ಅರ್ಥ ವಿವರಣೆ ನೀಡಲಾಗಿದೆ. ಆರ್ಥಿಕ ಮತ್ತು ಸಾಮಾಜಿಕ ತುಳಿತಕ್ಕೆ ಒಳಗಾದ ಎಲ್ಲ ಜಾತಿಯ ಜನ–ಇದು

---

1. ಅನ್ವೇಷಣೆ : ಸಂ.2, ಸಂಚಿಕೆ 5–6, ಮಾರ್ಚ್–ಏಪ್ರಿಲ್ 1986. ಪು. 12–15

'ದಲಿತರು' ಎಂಬುದಕ್ಕೆ ನಮ್ಮ ಅರ್ಥವಿವರಣೆ.[1] ಅಂದರೆ, ಈ ಮೊದಲೇ ಸೂಚಿಸಿರು ವಂತೆ ದಲಿತ ಬಂಡಾಯ ಸಾಹಿತ್ಯದ ಸಾಮಾಜಿಕ ನಿಲುವನ್ನು ಸ್ವತಃ ಸೃಜನಾತ್ಮಕ ಸಾಹಿತ್ಯದಲ್ಲೇ ನೋಡಬೇಕೆಂಬುದು ಸ್ವಯಂವೇದ್ಯವೇ ಆದರೂ, ಆ ಬಗ್ಗೆ ಈ ಲೇಖ ನದ ಸಂದರ್ಭದಲ್ಲಿ ಒಂದು ಸ್ಪಷ್ಟೀಕರಣವನ್ನು ಸೂಚಿಸುವುದೂ ಪ್ರಬಂಧದ ಮಿತಿಯ ದೃಷ್ಟಿಯಲ್ಲಿ ಸೂಕ್ತವೆನಿಸುತ್ತದೆ. ಅದೆಂದರೆ ದಲಿತ ಬಂಡಾಯದ ಸಾಮಾಜಿಕ ಧೋರಣೆಯಲ್ಲಿ ಅಡಗಿರುವ ಅಸ್ಪೃಶ್ಯತೆ, ಜಾತಿಪದ್ಧತಿ, ಮತ್ತು ಶ್ರಮಿಕ ಜನವರ್ಗವೇ ಮುಂತಾದ ವಸ್ತುಗಳು ಸಾಹಿತ್ಯದಲ್ಲಿ ಹೇಗೆ ವ್ಯಕ್ತಪಡೆದಿವೆ ಎಂಬುದನ್ನು ಕೆಲವು ಕಾವ್ಯ, ಕಾದಂಬರಿ ಹಾಗೂ ನಾಟಕಗಳಲ್ಲಿ ಸ್ಥೂಲವಾಗಿ ನೋಡಲು ಯತ್ನಿಸಲಾಗುವುದು. ಅಂತೆಯೇ ಮೇಲೆ ಸೂಚಿಸಿರುವ ಒಂದೊಂದು ವಿಷಯವನ್ನು ಕುರಿತ ಸಾಹಿತ್ಯ ಭಾಗ ವನ್ನು ಆಯಾ ದಲಿತ ಬಂಡಾಯ ಕೃತಿಕಾರರ ಕೃತಿ ಭಾಗಗಳಿಂದಲೇ ಉದ್ಧರಿಸಿ ಅವು ಗಳ ಪರಿಶೀಲನೆಯಲ್ಲಿ ತೊಡಗಬಹುದು.

ಮೊದಲಿಗೆ ಅಸ್ಪೃಶ್ಯತೆ ಮತ್ತು ಅದರ ಇನ್ನೊಂದು ರೂಪವಾದ ಮತಾಂತರದಂಥ ವಸ್ತು ಯಾವ ಯಾವ ಪರಿಯಲ್ಲಿ ಕಾವ್ಯವಾಗುವ ಯತ್ನ ನಡೆದಿದೆ ಎಂಬುದಕ್ಕೆ ಡಾ|| ಅರವಿಂದ ಮಾಲಗತ್ತಿಯವರ ಒಂದು ಪದ್ಯ ಭಾಗವನ್ನು ನೋಡಬಹುದು :

"ಹರಿಜನ್ರು ಮತಾಂತರ ಹೊಂದತಾರಂದ್ರ / ಮಂತ್ರಿಗೊಳು ಹೋಟ ಹೊಕ್ಕದಂದ,
ಸ್ವಾಮಿಗೋಳು ಧರ್ಮ ಹಾಳಕ್ಕದಂತ / ಓಡಿಬಂದ. ಹೊಂದಬ್ಯಾಡ್ರೆಂದ ವಿನಃ
ಯಾಕ ಹೊಂದತಿರಂತ ಕೇಳಲಿಲ್ಲ / ಯಾಕಂದ್ರ,
ಕುಂಡಿಬುಡಕ ನೀರ ಬಂದ ಮ್ಯಾಲ ಎಲ್ಲರೂ ಏಳವ್ರು" [2]

ಅಂದರೆ, ಅಸ್ಪೃಶ್ಯತೆ ಮತ್ತು ಮತಾಂತರದಂಥ ಶುದ್ಧಧಾರ್ಮಿಕವೂ ಶುಷ್ಕವೂ ಆದ ವಸ್ತುವಿಗೆ ರಾಜಕೀಯ ವಿಡಂಬನ ಶೈಲಿಯಲ್ಲಿ, ನವಿರಾದ ಕಾವ್ಯ ಸ್ಪರ್ಶ ಮಾಡಿಸುತ್ತಿರು ವುದನ್ನು ಇಲ್ಲಿ ಗಮನಿಸಬೇಕು. ಅದೇ ಸಂದರ್ಭದಲ್ಲಿ ಈ ಕಾವ್ಯಭಾಗದಲ್ಲಿ ವ್ಯಕ್ತವಾಗು ತ್ತಿರುವ ಸಾಮಾಜಿಕ ಧೋರಣೆಯ ಸ್ವರೂಪವನ್ನೂ ಮನಗಾಣಲೆತ್ನಿಸಬೇಕು. ಏಕೆಂದರೆ, ಅಸ್ಪೃಶ್ಯರು ಮತಾಂತರ ಹೊರಟಾಗ ಮಂತ್ರಿಗಳು, ಮಹಾ ಕವಿಗಳು, ಧರ್ಮಗುರುಗಳೇ ಮುಂತಾದ ಸಮಾಜದ ಗಣ್ಯರು, ಮತಾಂತರ ಹೊಂದ ಬೇಡಿ ಎಂದು ಅಸ್ಪೃಶ್ಯರಿಗೆ ಉಪದೇಶ ಮಾಡುವರೇ ಹೊರತು ; ನಿಮ್ಮ ಮತಾಂತ

1. ಬಂಡಾಯ ಸಾಹಿತ್ಯ : ನೆಲೆ ಬೆಲೆ ಪು. 22 – 1986 ಸಂ. ಗಂಗಾಧರ ಮೊದಲಿಯಾರ್

2. ಮೂಕನಿಗೆ ಬಾಯಿ ಬಂದಾಗ ಪು. 46 – 1981

ರಕ್ಕೆ ಕಾರಣವೇನೆಂದು ಯಾರೂ ಕೇಳಬಯಸುವುದಿಲ್ಲ. ಏಕೆಂದರೆ, ಅಸ್ಪೃಶ್ಯರ ಮತಾಂತರದಿಂದ ಉಂಟಾಗುವ ವ್ಯಾವಾರಿಕ ಮೌಲ್ಯಗಳ ಸ್ಥಾನಪಲ್ಲಟದ ದುಷ್ಪರಿಣಾಮ ವನ್ನು ಈ ಮಹನೀಯರೆಲ್ಲ ಬಲ್ಲವರಾಗಿದ್ದಾರೆ. ಅದೇ ಸಂದರ್ಭದಲ್ಲಿ ಮತಾಂತರ ಬೇಡವೆಂದು ಅಸ್ಪೃಶ್ಯರಿಗೆ ಉಪದೇಶ ಮಾಡುವ ಈ ಗಣ್ಯರು ಮೇಲುವರ್ಗದವರೂ ಸವರ್ಣೀಯರೂ ಆಗಿದ್ದಾರೆ ಎಂಬುದು ಆಕಸ್ಮಿಕವೇ ಆದರೂ, ಅದು ಸತ್ಯ ಸಂಗತಿ ಎಂಬುದನ್ನು ಅಲ್ಲಗಳೆಯುವಂತಿಲ್ಲ. ಹೀಗೆ, ಈ ತರ್ಕವೇನೇ ಇದ್ದರೂ ಅಸ್ಪೃಶ್ಯತೆ ಯಂಥ ಸಮಸ್ಯೆಗೆ ದಲಿತ ಬಂಡಾಯದ ಸಂದರ್ಭದಲ್ಲಿ ಉಂಟಾದ ಪ್ರತಿಕ್ರಿಯೆಯನ್ನೂ, ಆ ವಸ್ತುವನ್ನು ಕಾವ್ಯವಾಗಿಸುವಲ್ಲಿನ ಸಾಮಾಜಿಕ ನಿಲುವನ್ನೂ ಜೊತೆಗೆ ಲೇಖಕರ ಸಾಮಾಜಿಕ ಧೋರಣೆಯನ್ನೂ ಇಲ್ಲಿ ಕಾಣಬಹುದಾಗಿದೆ.

ಇದೇ ವಸ್ತು ಕಾವ್ಯವಾಗಿರುವ ಈ ಬಗೆಯ ಇನ್ನೂ ಹಲವಾರು ಕವಿತೆಗಳನ್ನು ದಲಿತ ಬಂಡಾಯದಲ್ಲಿ ಕಾಣಬಹುದಾಗಿದೆ. ಉದಾಹರಣೆಗೆ : ಬರಗೂರು ರಾಮಚಂದ್ರಪ್ಪ ನವರ "ಮಾದಿಗರ ಹುಡುಗಿ"[1] ಡಾ|| ಆರ್ಕೆ, ಮಣಿಪಾಲರ "ಅಂಬೇಡ್ಕರ್ ಮತ್ತು ನನ್ನೂರ ಕೊರಗನ ಆನೆಕಾಲು"[2] ಡಾ|| ಬಸವರಾಜ ಸಬರದ ಅವರ "ರಕ್ತ ಮಾಂಸದ ಹಾಡು"[3] ಮತ್ತು ಡಾ|| ಚೆನ್ನಣ್ಣ ವಾಲೀಕಾರರ "ಹೊಲೆಸಂಕಪ್ಪನ ಹಾಡು"[4] ಮುಂತಾದ ಕವಿತೆಗಳನ್ನು ನೋಡಬಹುದು. ಅಷ್ಟೇ ಅಲ್ಲದೆ, ಇಂಥ ಕವಿತೆಗಳಲ್ಲಿ ಹಲವು ಹತ್ತು ಧಾಟಿಯಲ್ಲಿ ಬಳಸಿಕೊಳ್ಳಲಾಗಿರುವ ಅಸ್ಪೃಶ್ಯತೆಯಂಥ ವಸ್ತುವನ್ನು ಈ ಪ್ರಮಾಣದಲ್ಲಿ ಕಾವ್ಯವಾಗಿಸುವ ಕ್ರಿಯೆ, ಅದರಲ್ಲೂ ಪ್ರತಿಭಟನೆಯ ಧಾಟಿಯಲ್ಲಿ, ರೂಢಿಗತ ಮೌಲ್ಯಾಸಕ್ತರ ಅಳುಕು ಪ್ರಜ್ಞೆಯನ್ನು ಬಯಲು ಮಾಡುವ ಪರಿಯಲ್ಲಿ, ಆ ವಸ್ತುವನ್ನು ಕಾವ್ಯವಾಗಿಸಿರುವುದು ಆಧುನಿಕ ಕನ್ನಡ ಸಾಹಿತ್ಯದಲ್ಲಿ ದಲಿತ ಬಂಡಾಯದಲ್ಲಿ ಮಾತ್ರವೆಂದು ತೋರುತ್ತದೆ. ಆದರಲ್ಲೂ ಈ ವಸ್ತುವನ್ನು ಕಾವ್ಯ ದಂಥ ಮಾಧ್ಯಮದ ಮೂಲಕ ಒಂದು ರೀತಿಯ ದೈನಂದಿನ ಸಮಾಜೀಕರಣಕ್ಕೆ ಒಳಪಡಿ ಸುತ್ತಿರುವಲ್ಲಿ, ದಲಿತ ಬಂಡಾಯ ಲೇಖಕರ ಸಾಮಾಜಿಕ ಧೋರಣೆಯ ಸ್ವರೂಪವನ್ನೂ ಆ ಪ್ರಾಕಾರದ ಸಾಮಾಜಿಕ ನಿಲುವನ್ನು ಅರಿಯಬಹುದಾಗಿದೆ.

ಈ ಸಂದರ್ಭಕ್ಕೆ ಸೂಕ್ತವೂ ಸಮರ್ಥವೂ ಆದ ಇನ್ನೊಂದು ನಿದರ್ಶನವೆಂದರೆ ಕುಂ. ವೀರಭದ್ರಪ್ಪನವರ "ಕೆಂಡದ ಮಳೆ" ಕಾದಂಬರಿಯಲ್ಲಿನ ರೆಹಮಾನಜ್ಜನ ಹೆಣದ

---

1. ನೆತ್ತರಲ್ಲಿ ನೆಂದ ಹೂವು ಪು. 1–1983.
2. ಅಂಬೇಡ್ಕರ್ ಮತ್ತು ನನ್ನೂರ ಕೊರಗನ ಆನೆಕಾಲು ಪು. 31–32–1982.
3. ನನ್ನವರ ಹಾಡು ಪು. 16–18–1981.
4. ಪ್ಯಾಂಥರ್ ಪದ್ಯಗಳು ಪು. 53–4–1981.

ಪ್ರಸಂಗ. ದೂಪದಳ್ಳಿಯ ಲಿಂಗಾಯತರ ಶಿವನಂಜೇಗೌಡನ ದೇವರ ಮನೆಯ ಹಣದ ಪೆಟಾರಿಯ ಮೇಲೆ ಇಡಲಾಗಿದ್ದ ರೆಹಮಾನಜ್ಜನ ಹೆಣವನ್ನು, ಆಚೆಗೆ ಸಾಗಿಸಲು ಪಕ್ಕ ದೂರಾದ ಅಂಬಳಿಯ ಹೊಲೆಮಾದಿಗರನ್ನು ಕರೆತರಲಾಗುತ್ತದೆ. ರಹಮಾನಜ್ಜನ ಹೆಣವನ್ನು ಆಚೆಗೆ ಸಾಗಿಸಿದ ಹೊಲೆಮಾದಿಗರು, ಆ ಮೊದಲೇ ಮಾಡಿಕೊಂಡಿದ್ದ ಒಪ್ಪಂದದಂತೆ ಹಣವನ್ನು ಕೇಳಿದಾಗ, ಹಣ ಕೊಡಲು ಗೌಡ ಸತಾಯಿಸಿದ್ದು ಮಾತ್ರ ವಲ್ಲದೆ, ಹೊಲೆಮಾದಿಗರ ಮೇಲೆ ಕಳ್ಳತನದ ಆರೋಪವನ್ನು ಹೊರಿಸಲು ಗೌಡ ಯತ್ನಿಸುತ್ತಾನೆ. ಗೌಡನ ಈ ನಡವಳಿಕೆ ಸರಿಯಲ್ಲವೆಂದು ಹೊನ್ನಜ್ಜ ಮಾನಜ್ಜ ಮುಂತಾದ ಲಿಂಗಾಯಿತ ಗಣ್ಯರೆಲ್ಲ ಖಂಡಿಸಿದರೂ, ಗೌಡ ಅವರಿಗೆ ಹಣ ಕೊಡದೆ ಸತಾಯಿಸುತ್ತಾನೆ. ಅರ್ಥಾತ್, ಭಾಷಾನನ್ನು ಬಂಧಿಸಲು ಬಂದಂಥ ಪೋಲಿಸರೇ ಗೌಡನ ಹಣ ಮತ್ತು ಒಡವೆಗಳನ್ನೆಲ್ಲಾ ಕದ್ದು ಸಾಗಿಸಿದ್ದರೂ, ಪೋಲಿಸರ ಮೇಲೆ ಆ ಕಳ್ಳತನ ಹೊರಿಸಲು ಸಮರ್ಥನಲ್ಲದ ಗೌಡ, ಅದೇ ಕಳ್ಳತನವನ್ನು ಹೊಲೆಮಾದಿಗರ ಮೇಲೆ ಹೊರಿಸುವುದು ಸುಲಭವೆಂದು ಯೋಚಿಸುತ್ತಾನೆ. ಈ ಮಿಥ್ಯಾರೋಪದಿಂದ ರೊಚ್ಚಿಗೆದ್ದ ಹೊಲೆಮಾದಿಗರ ಲಿಂಗ ಮತ್ತು ಸೂಗರ ಬಾಯಲ್ಲಿ ಬರುವ ಮಾತುಗಳು ಹೀಗಿವೆ : "ಕಳ್ತನ ಆಗ್ಯೆತೋ ಬಿಟ್ಟೈತೋ ಅದ್ಕೆ ನಾವೇನು ಮಾಡೋದು ? ಸಾಲ ತಗಂಡೋರು ಹೀಗೆ ಹೇಳಿದ್ರೆ ಗೌಡ ಕೇಳೋ ಮನುಷ್ಯನೇನು ? ನಿಮ್ಮೆಂಡ್ರೂನ ಯಾವೋನಿಗಾದ್ರೂ ಅಡ್ಡಹಾಕಿ ಅಸಲು ಬಡ್ಡಿ ಕಟ್ರಲೇ ಎಂದು ಗೆರೆ ಕುಯ್ದು ಕೇಳಲ್ವ ? ಹಾಗೆಯೇ ನಾವೂ, ಅವನ ಹೆಂಡ್ರೂ ಸೊಸೇನ ಯಾವೋನತ್ರನಾದ್ರೂ ಮಲಗುಹಾಕಿ ಹಣ ಹೊಂದಿಸಿಕೊಡ್ಲಿ........"[1] ಎಂದು ಪ್ರತಿಭಟಿಸುತ್ತಾರೆ. ಅಂದರೆ, ಯಾವುದೇ ಮಾನವ ಚೇತನದಲ್ಲೂ ಅತ್ಯಂತ ನೈಸರ್ಗಿಕವಾಗಿಯೇ ಇರಬಹುದಾದ ಆತ್ಮಾಭಿಮಾನದ ಧೋರಣೆಗೆ ದಲಿತ ಬಂಡಾಯದ ಸಂದರ್ಭದಲ್ಲಿ ಜೀವಂತ ಸಾಹಿತ್ಯದ ಸ್ಪರ್ಶವಾಗಿರುವಂತೆ ತೋರುತ್ತದೆ. ಹಾಗೆಯೇ, ಜಮೀನ್ದಾರಿ ಪದ್ಧತಿಯು ಬಂಡ ವಾಳಶಾಹಿ ವ್ಯವಸ್ಥೆಯಲ್ಲಿ ಶ್ರಮಿಕ ವರ್ಗಕ್ಕೆ ಆಗುವ ಅನ್ಯಾಯವನ್ನು ಪ್ರಸಂಗದಿಂದ ಅರಿಯಬಹುದಾಗಿದೆ ಎಂಬುದು ಬಾಹ್ಯ ಸತ್ಯವೇ ಆದರೂ, ರೆಹಮಾನಜ್ಜನ ಹೆಣವನ್ನು ಆಚೆಗೆ ಸಾಗಿಸಿದ ಲಿಂಗ ಮತ್ತು ಸೂಗರು ಸಾಮಾಜಿಕವಾಗಿ ನಿರ್ಗತಿಕರೂ ಅಸ್ಪೃಶ್ಯರೂ ಆಗಿರುವುದು ಆಂತರಿಕವೂ ನಿಗೂಢ ಸತ್ಯವೂ ಆಗಿದೆ ಎಂಬುದನ್ನು ಮೊದಲು ಮನ ಗಾಣಬೇಕೆಂದು ತೋರುತ್ತದೆ. ಉಳಿದಂತೆ "ಕೆಂಡದ ಮಳೆ" ಕಾದಂಬರಿಯ ಸಂದರ್ಭ ದಲ್ಲಿ ಕುಂ. ವೀರಭದ್ರಪ್ಪನವರ ಪೂರ್ಣ ಮಾನವ ದೃಷ್ಟಿ ಹಾಗೂ ಉದಾತ್ತ ವಿಚಾರದ ಧಾಟಿ ತನ್ನ ತಾನೇ ಇಲ್ಲಿ ಮೆಚ್ಚಿಸಿಕೊಳ್ಳುತ್ತದೆ.

---

1. ಕೆಂಡದಮಳೆ ಪು. 225–1986

ಎರಡನೆಯ ಭಾಗವಾದ ಜಾತಿ ವ್ಯವಸ್ಥೆಯ ಬಗೆಗೆ ದಲಿತ ಬಂಡಾಯದ ಧೋರಣೆಯನ್ನು ಈ ಕೆಳಕಂಡ ಕೆಲವು ಪದ್ಯಗಳ ಸಾಲುಗಳಲ್ಲಿ ನೋಡಬಹುದಾಗಿದೆ.

"ಹಣೆ ಬರಹದಣೆಕಟ್ಟು / ಜಾತಿಮತಗಳ ಸುಟ್ಟು
ಬಂದೇವು ಬಡವರು / ಹೊಸಪಂಜು ಹಿಡಿದು"[1] (ಬರಗೂರು ರಾಮಚಂದ್ರಪ್ಪ)
"ಜಾತಿಮತಗಳ ಮುಳ್ಳಿನಮೆಳೆಗೆ / ಮುಳ್ಳಾದರು ಇವರು
ತಮ್ಮನು ನುಂಗಿದ ಏಳು ಸಮುದ್ರಕೆ / ಮುಗಿಲಾದರು ಇವರು"[2]
(ಸಿದ್ಧಲಿಂಗಯ್ಯ)

ಇಂಥ ಅನೇಕ ನಿದರ್ಶನಗಳನ್ನು ದಲಿತ ಬಂಡಾಯ ಸಾಹಿತ್ಯದಲ್ಲಿ ಕಾಣಬಹುದಾಗಿದ್ದರೂ, ಈ ಸಂದರ್ಭದಲ್ಲಿ ಒಂದು ಮಾತನ್ನಂತೂ ಹೇಳಲೇಬೇಕಾಗಿದೆ. ಅದೇನೆಂದರೆ, ಜಾತಿವ್ಯವಸ್ಥೆ ಹಾಗೂ ಅದರ ದುಷ್ಪರಿಣಾಮಗಳು ಕಲಾತ್ಮಕ ಅಭಿವ್ಯಕ್ತಿಯನ್ನು ಪಡೆದ ಕಾವ್ಯ ಇನ್ನೂ ಆಗಬೇಕಾದ್ದಿದೆ ಎಂದು ಸಧ್ಯ ಹೇಳಬಹುದೆನಿಸುತ್ತದೆ. ಹಾಗೆಯೇ, ಜನಪರದಾದ ಒಂದು ಸಾಮಾಜಿಕ ಆಂದೋಲನದ ಮುಖವಾಣಿಯ ಧಾಟಿಯಲ್ಲಿ ಸೃಷ್ಟಿಯಾಗುತ್ತಿರುವ ದಲಿತ ಬಂಡಾಯ ಸಾಹಿತ್ಯದ–ಅದರಲ್ಲೂ ಕಾವ್ಯದ ಸಾಲುಗಳು ಎಷ್ಟೋ ಸಂದರ್ಭಗಳಲ್ಲಿ ಕೇವಲ ಘೋಷಣೆಯ ಧಾಟಿಯಿಂದ ಹೊರತಾಗಲು, ಇನ್ನೂ ಸಾಧ್ಯವಾಗಿಲ್ಲ ಎಂಬುದು ಸತ್ಯವೇ ಆದರೂ, ಅಸ್ಪೃಶ್ಯತೆ ಮತ್ತು ಜಾತಿ ವ್ಯವಸ್ಥೆಯ ನೈಚ್ಯತೆಯನ್ನೂ, ಅದರ ಗುಪ್ತಗಾಮಿನಿ ರೋಗಿಷ್ಟತೆಯನ್ನು, ಸಾಹಿತ್ಯಸಾಧ್ಯದುದ ಮೂಲಕ, ದೈನಂದಿನ ಜೀವನ ಚಟುದಟಿಕೆಗಳಲ್ಲಿ ಜನಜನಿತಗೊಳಿಸುವ ಮಟ್ಟದಲ್ಲಾದರೂ, ಇದು ಕೆಲಸ ಮಾಡಲು ಸಾಧ್ಯವಾಗಿದೆ ಎಂದೆನಿಸದೆ ಇರಲಾರದು. ಏಕೆಂದರೆ, ದಲಿತ ಬಂಡಾಯ ಸಾಹಿತ್ಯ ಎಂದಕೂಡಲೇ, ಅದೊಂದು ಸಾಂಸ್ಕೃತಿಕ ಆಂದೋಲನದ ಹಿನ್ನೆಲೆಯಿಂದ ಮೂಡಿಬಂದುದಾಗಿದೆ ಎಂಬುದು ನೆನಪಾಗದೇ ಇರುವಂತಿಲ್ಲ.

ಸದ್ಯ ಕೊನೆಯದಾಗಿ, ದಲಿತ ಬಂಡಾಯ ಸಾಹಿತ್ಯದ ಸಾಮಾಜಿಕ ಧೋರಣೆಯ ಇನ್ನೊಂದು ಪ್ರಮುಖ ವಿಚಾರವೆನಿಸುವ ಶ್ರಮಿಕ ವರ್ಗವನ್ನು ಕುರಿತ ವಿಚಾರಗಳು ಕಾವ್ಯದ ವ್ಯೆಪಡೆದಿರುವ ರೀತಿಯನ್ನೂ, ಆ ಕುರಿತ ತಾತ್ವಿಕ ಜಿಜ್ಞಾಸೆಯಿಂದ ಮೂಡುವ ಸಾಮಾಜಿಕ ನಿಲುವಿನ ಸ್ವರೂಪವನ್ನೂ ಈ ಮುಂದಿನ ಕೆಲವು ಕಾವ್ಯಭಾಗಗಳಿಂದ ನೋಡಲೆತ್ನಿಸಬಹುದು. ಈ ಸಂದರ್ಭದಲ್ಲಿ ಪರಿಶೀಲನಾರ್ಹವೆನಿಸುವ ಹಲವು ಮುಖ್ಯ ಕವಿತೆಗಳಲ್ಲಿ ಒಂದೆಂದರೆ ಜಂಬಣ್ಣ ಅಮರಚಿಂತರ "ಪೆಟ್ರೋಮ್ಯಾಕ್ಸ್ ಹೊತ್ತ ಕೊರವರು"[3] ಎಂಬ ಕವಿತೆ. "ಕೊರವರು" ಎಂಬ ಜನವರ್ಗವನ್ನು ಒಂದು ಪಾತ್ರ

---

1. ನೆತ್ತರಲ್ಲಿ ನೆಂದ ಹೂವು ಪು. 30, 2. ಸಾವಿರಾರು ನದಿಗಳು ಪು. 1.
3. ಅಧೊಜಗತ್ತಿನ ಆಕಾವ್ಯ ಪು. 20–1982.

ವನ್ನಾಗಿ ತೆಗೆದುಕೊಂಡಿರುವ ಈ ಕವಿತೆಯಲ್ಲಿ, ಆ ಪಾತ್ರದ ಬದುಕಿನ ಸುತ್ತಲೂ ಉಂಟಾಗುವ ವಿವರಗಳನ್ನು, ದಲಿತ ಬಂಡಾಯದ ತಾತ್ವಿಕ ವಿಚಾರಗಳ ಸೆಲೆಯಲ್ಲಿ ವಿಶ್ಲೇಷಣೆಗೆ ಅಳವಡಿಸಿದಲ್ಲಿ, ಚರ್ಚೆಗೆ ಯೋಗ್ಯವೆನಿಸುವ ಹಲವಾರು ವಿಚಾರಗಳು ಇಲ್ಲಿಂದ ಹೊರಡುವಂತೆ ತೋರುತ್ತದೆ. ಅಂತೆಯೇ, ಪೆಟ್ರೋಮ್ಯಾಕ್ಸ್ ಹೊತ್ತು ಸಾಗುತ್ತಿರುವ ಕೊರವರ ಒಂದು ಪೂರ್ಣ ಚಿತ್ರವನ್ನು ಕೊಡುವ ಕಾವ್ಯದ ಮುಖ್ಯವಾದ ಕೆಲವು ವಿವರಗಳನ್ನು ಮೊದಲು ಗಮನಿಸುವುದು ಸೂಕ್ತವೆನಿಸುತ್ತದೆ.

> "ಯಾರಿವರು ? ಯಾರಿವರು ? / ಯಾವ ಕಡೆಗೆ ನಡೆದಿರುವರು ?
> ತಲಾತಲಾಂತರ ತಲೆಯಮೇಲೆ / ಬೆಳಕು ಹೊತ್ತು ಸಾಗಿದರು
> ಅವರಿವರು, ಯಾರಿಗ್ಯಾಕೆ– / ತಮ್ಮ ನೆರಳಿಗೇ ಅಪರಿಚಿತರು
> ಪಂಡಿತ ಕವಿಗಳು ಮರೆತ / ಜಾನಪದ ಛಂದಗಳು"

ಕವಿತೆಯು ಈ ಮೊದಲ ಭಾಗದಲ್ಲಿ ಕೊರವರನ್ನು ಪ್ರಶ್ನಾರ್ಥಕ ಧಾಟಿಯಲ್ಲಿ ಪರಿಚಯಿಸುತ್ತಿರುವುದನ್ನೂ ಆ ಸಾಮಾನ್ಯವಾದ ಪ್ರಶ್ನಾರ್ಥಕ ಧಾಟಿಯ ಮೂಲಕ, ಅದರ ಬದುಕಿನ ಈ ಸ್ಥಿತಿಗೆ ಕಾರಣವಾದ ಇಡೀ ವ್ಯವಸ್ಥೆಯನ್ನೇ ಪ್ರಶ್ನಿಸುತ್ತಿರುವಂತೆ ಓದಿಸಿಕೊಳ್ಳುವ, ಕವಿತೆಯ ಧ್ವನಿ ಮಾರ್ಮಿಕತೆ ಇಲ್ಲಿ ಗಮನಾರ್ಹ ಎಂದೆನಿಸುತ್ತದೆ.

> "ತಲೆಯಮೇಲೆ ಬಿಸಿಲಿನ ಕಾವು / ಹೊಟ್ಟೆಯೊಳಗೆ ಹಸಿವಿನ ಗಾವು
> ಜೀವನವೆಲ್ಲ ಕುದ್ದು ಕುದ್ದು / ಆವಿಯಾಗಿ ಹೋದವರು
> ನಿತ್ಯ ನಿತ್ಯ ಹೊಟ್ಟೆಯಿಂದ / ಹಸಿವನ್ನು ಹೆತ್ತವರು"

ಕವಿತೆಯ ಈ ಎರಡನೆಯ ಭಾಗದಲ್ಲಿ, ಆ ಶ್ರಮಿಕ ವರ್ಗದ ಬಗ್ಗೆ ಇನ್ನಷ್ಟು ವಿವರಗಳು ದೊರೆಯುವಂತೆಯೇ, ಮೊದಲ ಭಾಗದಲ್ಲಿರುವ "ತಲಾತಲಾಂತರ ತಲೆಯ ಮೇಲೆ ಬೆಳಕು ಹೊತ್ತು ಸಾಗಿದವರು" ಎಂಬ ಸಾಲು, ಎರಡನೆಯ ಭಾಗದ "ನಿತ್ಯ ನಿತ್ಯ ಹೊಟ್ಟೆಯಿಂದ ಹಸಿವನ್ನು ಹೆತ್ತವರು" ಎಂಬಲ್ಲಿ ಈ ಶ್ರಮಿಕ ಜನವರ್ಗ ತಲಾಂತರಗಳಿಂದಲೂ ಬೆಳಕನ್ನು ಹೊತ್ತು ಕತ್ತಲೆಯಲ್ಲಿ ಬದುಕುತ್ತಿರುವ ಒಂದು ಪೂರ್ಣ ಚಿತ್ರವನ್ನು ಕಟ್ಟಿಕೊಳ್ಳುತ್ತಿರುವುದನ್ನು ಇಲ್ಲಿ ಗಮನಿಸಬೇಕು. ಅಂದರೆ, ಸಮಕಾಲೀನ ಜೀವನ ವ್ಯವಸ್ಥೆಯ ಒಂದು ಜ್ವಲಂತ ನಿದರ್ಶನವನ್ನು ಕಾವ್ಯವಾಗಿಸಿದ ಈ ಕವಿತೆಯು ಸಂದರ್ಭದಲ್ಲಿ, ದಲಿತ ಬಂಡಾಯ ಲೇಖಕನ ಸಾಮಾಜಿಕ ನಿಲುವೇನೆಂಬುದನ್ನು ಸಾಧಾರಣವಾಗಿ ಗ್ರಹಿಸಿಕೊಳ್ಳಬಹುದಾಗಿದೆಯಾದರೂ, ಕವಿತೆಯನ್ನು ಓದಿ ಮುಗಿಸಿದ ನಂತರ ಅದರ ಅಂತ್ಯದಿಂದ ಹೊರಡುವ ತಾತ್ವಿಕ ಸೋಲನ್ನು ಮಾತ್ರ ಮರೆಮಾಡುವಂತಿಲ್ಲ. ಉದಾಹರಣೆಗೆ ಈ ಕೆಳಗಿನ ಸಾಲುಗಳನ್ನೇ ನೋಡಬಹುದು :

"ಪೆಟ್ರೋಮಾಕ್ಸ್ ಹೊತ್ತವರು / ಬೆಳಕಿನಡಿಯ ಕತ್ತಲಲ್ಲಿ
ಕತ್ತಲಾಗಿ ನಿಂತವರು / ಕತ್ತಲೆಯ ಹುದಲಲ್ಲಿ
ಹೂತುಹೋಗುತ್ತಿರುವವರು"

ಅಂದರೆ, ಈ ಮೊದಲೇ ಹೇಳಿರುವಂತೆ ವ್ಯವಸ್ಥೆಯನ್ನೇ ಪ್ರಶ್ನಿಸುತ್ತಿರುವ ಪ್ರಶ್ನಾರ್ಥಕ ಧಾಟಿಯಲ್ಲಿ ಆರಂಭವಾದ ಈ ಕವಿತೆ, ಶ್ರಮಿಕ ವರ್ಗದ ತಲೆತಲಾಂತರಗಳ ಬೆಳಕಿನಿಂದ ವಂಚಿತವಾದ ಕತ್ತಲೆ ಬದುಕಿನ ರೂಢಿಗತ ಮೌಲ್ಯಗಳ ವಿವರಗಳನ್ನೆಲ್ಲಾ ಕೇವಲ ಕೆಲವೇ ಮಾತುಗಳಲ್ಲಿ ನಿರೂಪಿಸುತ್ತ ನಡೆದು, ಕೊನೆಯಲ್ಲಿ "ಕತ್ತಲಲ್ಲಿ ಕತ್ತಲಾಗಿ ನಿಂತವರು–ಕತ್ತಲೆಯ ಹುದಲಲ್ಲಿ ಹೂತುಹೋಗುತ್ತಿರುವವರು" ಎಂಬ ಸಾಲುಗಳಿಗೆ ಬರುತ್ತಿದ್ದಂತೆಯೇ, ಆರಂಭದ ಪ್ರಶ್ನಾರ್ಥಕ ಧಾಟಿ, ಕೇವಲ ವಿಧ್ಯರ್ಥಕ (affirmative tone) ಧಾಟಿಯಲ್ಲಿ ಕೊನೆಯಾಗುವ ಮೂಲಕ ಕವಿತೆ ಸೋಲುತ್ತದೆ ಎಂದೆನಿಸುತ್ತದೆ. ಏಕೆಂದರೆ, ದೀಪದ ಕೆಳಗೇ ಕತ್ತಲೇ ಇರುವುದು ಎಂಬ ಭೌತಿಕ ಸತ್ಯವನ್ನು ಪ್ರತಿಮೆಯನ್ನಾಗಿ ಮಾಡಿಕೊಂಡ ಈ ಕವಿ, ವ್ಯಕ್ತಿ ಪೆಟ್ರೋಮಾಕ್ಸ್ ಅನ್ನು ಹೊತ್ತು ಎಷ್ಟೇ ದೂರ ಸಾಗಿದ್ದರೂ ಆ ಹೊರುವ ಕ್ರಿಯೆಯಿಂದ ತನ್ನ ದೇಹದ ಅಂಗಾಂಗಗಳಲ್ಲಿ ಉಂಟಾಗುವ ಏಕತಾನತೆಯನ್ನು ಬದಲಾಯಿಸುವ ಅನಿವಾರ್ಯ ಬದಲಾವಣೆಯ ಸಂದರ್ಭದಲ್ಲಾದರೂ, ತಾನು ಹೊತ್ತಂಥ ಪೆಟ್ರೋಮಾಕ್ಸ್ ಅನ್ನು ಒಮ್ಮೆ ಕೆಳಗಿಳಿಸಲೇಬೇಕು, ತನ್ಮೂಲಕ ಉಂಟಾಗುವ ಬೆಳಕು ಕತ್ತಲೆಗಳ ಸ್ಥಾನಪಲ್ಲಟದಿಂದ ಅವನು ತನ್ನನ್ನೂ ತನ್ನಂತೇ ಪರರನ್ನೂ ನೋಡಲೇ ಬೇಕು ಎಂಬುದನ್ನು ಅಲ್ಲಗಳೆಯಲು ಸಾಧ್ಯವಿರುವಂತೆ ತೋರುವುದಿಲ್ಲ. ಅದೇನೇ ಇದ್ದರೂ ನಿಸ್ಸಂದೇಹವಾಗಿ ಇದೊಂದು ಗಮನಾರ್ಹವಾದ ಕವಿತೆಯೆನಿಸುತ್ತದೆ.

ಬಹುಶಃ ಈ ಬಗ್ಗೆ ಇನ್ನೂ ಕೆಲವು ಕವಿತೆಗಳನ್ನೂ ನೋಡಬಹುದೆಂದು ತೋರುತ್ತವೆ. ಉದಾಹರಣೆಗೆ ರಮಜಾನದರ್ಗಾ ಅವರ "ಏ ದೇಹಲಿ"[1] ಬರಗೂರು ರಾಮಚಂದ್ರಪ್ಪನವರ "ಶ್ರಮ ಜೀವಿಗಳ ಹಾಡು"[2] ಡಾ॥ ಚೆನ್ನಣ್ಣವಾಲಿಕಾರರ "ರೈತರ ಹೋರಾಟದ ಹಾಡು"[3] ಹಾಗೂ ಬಸವರಾಜ ಸಬರದ ಅವರ "ಕಾರ್ಮಿಕರು ಮತ್ತು ಬಂಡಾಯ"[4] ಇತ್ಯಾದಿ ಇತ್ಯಾದಿ.

---

1. ಕಾವ್ಯ ಬಂತು ಬೀದಿಗೆ ಪು. 29–30–1978
2. ನೆತ್ತರಲ್ಲಿ ನೆಂದ ಹೂವು–17–18 3. ಪ್ಯಾಂಥರ್ ಪದ್ಯಗಳು ಪು. 9-10
4. ಮೂಡಲಕ ಕೆಂಪುಮೂಡ್ಯಾವ ಪು. 46–47 – 1987

ಇನ್ನು ದಲಿತ ಬಂಡಾಯ ಸಾಹಿತ್ಯದ ಸಾಮಾಜಿಕ ನಿಲುವನ್ನು ಅರ್ಥಮಾಡಿಕೊಳ್ಳಲು ಇನ್ನೊಂದು ಗಮನಾರ್ಹ ಕೃತಿ ಎಂದರೆ ಸತ್ಯಾನಂದ ಪಾತ್ರೋಟ ಅವರ "ನಮಗ ಯಾರೂ ಇಲ್ಲೋ ಎಪ್ಪ ಸಾಕ್ಷಿ" ಎಂಬ ಒಂದು ನಾಟಕ. ಶ್ರೀಮಂತಿಕೆ, ಅಧಿಕಾರ, ಹಾಗೂ ಜಾತೀಯ ಮೇಲುತನಗಳನ್ನು ಮುಂದೆ ಮಾಡಿಕೊಂಡ ಶೋಷಣೆಯ ಮಾಧ್ಯಮಗಳ ಹಿಡಿತದಲ್ಲಿ ಸಿಲುಕಿ, ಯಾವ ಸಾಕ್ಷಿಯೂ ಇಲ್ಲದೆ, ದಬ್ಬಾಳಿಕೆಗೆ ತುತ್ತಾಗುವ ಗ್ರಾಮೀಣ ಮುಗ್ಧರು, ಹಾಗೂ ಆ ದಬ್ಬಾಳಿಕೆಯ ವಿರುದ್ಧ ಅವರಲ್ಲಿ ಪುಟದೇಳುವ ಬಂಡಾಯದ ಹಾಗೂ ಅಸಹಾಯಕತೆಯ ಸ್ಥಿತಿಯನ್ನು ಈ ನಾಟಕದಲ್ಲಿ ಕಾಣಬಹುದಾಗಿದೆ.

ಆದರೆ ಲೇಖಕರ ಚಿಕಿತ್ಸಕ ದೃಷ್ಟಿಯ ಸಾಮಾಜಿಕ ನಿಲುವಿನ ಸಂಕೇತವೆನಿಸುವ ಹುಚ್ಚೀರನ ಪಾತ್ರ ಕೇವಲ ರಂಗ ಕ್ರಿಯೆಯ ಅಂಚಿನಲ್ಲೇ ಅಡ್ಡಾಡುವ ಬದಲು, ರಂಗ ಕ್ರಿಯೆಯ ಒಂದು ಅವಿಭಾಜ್ಯ ಅಂಗವೇ ಆಗಿದ್ದಲ್ಲಿ ಬಹುಶಃ ನಾಟಕ ಹೆಚ್ಚು ಪರಿಣಾಮಕಾರಿಯಾಗಿರುತ್ತಿತ್ತೇನೋ ಎಂಬ ಪ್ರೊ|| ಚಂದ್ರಶೇಖರ ಪಾಟೀಲರ ಅನಿಸಿಕೆ (ಬ್ಲರ್ಬ್) ಸರಿಯಾಗಿಯೇ ಇರುವಂತಿದೆ. ಏಕೆಂದರೆ, ವ್ಯವಸ್ಥೆಯ ವಿನಾಕಾರಣ ಕ್ರೌರ್ಯ ಹಾಗೂ ಅನ್ಯಾಯಗಳ ವಿರುದ್ಧ ಸಿಡಿದೇಳುವ ಮಾದನ ಬಂಡಾಯ, ಕೇವಲ ಒಂದು ಅಸಹಾಯಕ ಒಂಟಿದನಿ ಎನಿಸಲು ಕಾರಣ, ಅವನ ಬಂಡಾಯದ ದನಿಗೆ ಹುಚ್ಚೀರನ ಪಾತ್ರ ಒಂದು

---

* ಈ ಪ್ರಬಂಧವನ್ನು ಕುರಿತ ಸದರಿ ಗೋಷ್ಠಿಯಲ್ಲಿ ಉಂಟಾದ ತೀವ್ರ ಚರ್ಚೆ ಮತ್ತು ವಿವಾದ (ಪ್ರಜಾವಾಣಿ 3-4-1988)ದ ಸಂಬಂಧವಾಗಿ ಈ ಒಂದು ಟಿಪ್ಪಣಿಯನ್ನು ಕೊಡುವುದು ಸೂಕ್ತವೆನಿಸುತ್ತದೆ. ಅದರಲ್ಲೂ, ಪ್ರಬಂಧದ ಸಂದರ್ಭದಲ್ಲಿ ದೇವನೂರು ಮಹಾದೇವರ ಕಥೆಗಳನ್ನು ಉಲ್ಲೇಖಿಸದಿರುವುದರ ವಿರುದ್ಧ ಎದ್ದಂಥ ಒಂದು ರೀತಿಯ ಪ್ರತಿಭಟನೆ ಸಮರ್ಥನೀಯ ಎಂದೇನೂ ಅನಿಸುವಂತಿಲ್ಲ. ಏಕೆಂದರೆ, ದಲಿತ ಬಂಡಾಯದ ಸಾಮಾಜಿಕ ನಿಲುವನ್ನು ಕುರಿತು ವಿಚಾರ ಮಾಡುವ ಸಂದರ್ಭದಲ್ಲಿ 'ಬಂಡಾಯ ಅಥವಾ ಪ್ರತಿಭಟನೆ"ಯ ಧ್ವನಿಯೇ ಇಲ್ಲದ, ಅಥವಾ ವ್ಯವಸ್ಥೆಯ ಪಾರಂಪರಿಕ ಮೌಲ್ಯಗಳನ್ನು ಯಥಾವತ್ತಾಗಿ ಸಮರ್ಥಿಸುತ್ತಿರುವ ಅವರ ಕಥಾನಕ ಧೋರಣೆಯನ್ನು ಪ್ರಸ್ತುತ ಪ್ರಬಂಧದಲ್ಲಿ ಗೌಣವಾಗಿ ಕಂಡದ್ದು ತಪ್ಪು ಎಂದಾಗಲಿ, ಅಥವಾ ಅವರನ್ನು ಕಡೆಗಣಿಸಿದ್ದೇನೆ ಎಂದಾಗಲಿ ಭಾವಿಸಲಿಕ್ಕೆ ಕಾರಣವಿದ್ದಂತಿಲ್ಲ. ಏಕೆಂದರೆ ಈ ನನ್ನ ಹಲವಾರು ಪ್ರಬಂಧಗಳಲ್ಲಿ ಅವರ ಕಥೆಗಳನ್ನು ಸಾಕಷ್ಟು ವಿಶದವಾಗಿಯೇ ವಿಚಾರ ಮಾಡಿದ್ದೇನೆ. ಹಾಗೆಯೇ ಎರಡನೆಯ ಅಂಶವೆಂದರೆ, ಶೂದ್ರಾತಿ ಶೂದ್ರರ ಪಾತ್ರಗಳನ್ನು ಕೇವಲ ಸೂಳೆಯರನ್ನಾಗಿ ಅಥವಾ ಜೀತಗಾರರನ್ನಾಗಿ ಮಾತ್ರ ದುಡಿಸಿಕೊಳ್ಳುವ ಡಾ|| ಅನಂತಮೂರ್ತಿ

ನೈತಿಕ ಜೀವರಸದಂತೆ ಪುಟಿದರೂ, ಆ ಪಾತ್ರ ಕೇವಲ ರಂಗಕ್ರಿಯೆಯ ಆಚೆಯೇ ಉಳಿದುಬಿಡುವುದರಿಂದ, ರಂಗ ಪ್ರಯೋಗದಿಂದ ಹೊರಡುವ ಇಡೀ ನಾಟಕದ ವಸ್ತುವಿನ ಪರಿಣಾಮದ ಪ್ರಖರತೆಗೆ ಧಕ್ಕೆಯಾಗುತ್ತಿರುವಂತೆ ಅನಿಸುತ್ತದೆ.*

---

ಹಾಗೂ ಡಾ|| ಭೈರಪ್ಪನವರ ದಲಿತ ಪಾತ್ರಗಳು ಹೇಗೆ ದಲಿತರ ಬದುಕಿನ ಸರ್ವ ವೇದನೆ–ಸಂವೇದನೆಗಳನ್ನೆಲ್ಲಾ ಧ್ವನಿಗೈಯಲು ಸಾಧ್ಯವಿಲ್ಲವೋ, ಹಾಗೆಯೇ ಅದಕ್ಕಿಂತ ಹೆಚ್ಚಿನದೇನನ್ನೂ ದೇವನೂರು ಮಹಾದೇವರ ಕಥೆಗಳಿಂದ ನಿರೀಕ್ಷಿಸಲು ಸಾಧ್ಯವಿದ್ದಂತಿಲ್ಲ. ಅಂದ ಬಳಿಕ ಅವರ ಕಥೆಗಳಲ್ಲಿ ದಲಿತ ಬಂಡಾಯದ ಸಾಮಾಜಿಕ ನಿಲುವನ್ನು ಹುಡುಕಲು ಯತ್ನಿಸುವುದರಿಂದ ಲೇಖಕರಿಗೆ ನ್ಯಾಯ ದೊರೆತಂತಾಗುವಂತಿಲ್ಲ. ಇನ್ನು ಧೋರಣೆಯಲ್ಲೂ ಅಭಿವ್ಯಕ್ತಿಯಲ್ಲು 'ನವ್ಯ'ದ ಲೇಖಕರಾದ ಕಾಳೇಗೌಡ ನಾಗವಾರ ಅವರನ್ನು ದಲಿತ ಬಂಡಾಯಕ್ಕೆ ತಂದು ವಿಚಾರ ಮಾಡುವುದು ಕೂಡ ಸಮಂಜಸವೆನಿಸುವಂತಿಲ್ಲ. "ದಲಿತ ಬಂಡಾಯ ಕಾವ್ಯ : ತಾತ್ವಿಕ ಜಿಜ್ಞಾಸೆ" ಎಂಬ ನನ್ನ ಇನ್ನೊಂದು ಪ್ರಬಂಧದಲ್ಲಿ ಕೂಡ ಈ ಅಂಶವನ್ನು ಸ್ಪಷ್ಟಪಡಿಸಿದ್ದೇನೆ. ○

---

## ಪುಸ್ತಕ ಸ್ವೀಕಾರ

**ಜೊತೆಯಾದವರು** (ಸಂ : ಜರಗನಹಳ್ಳಿ ಶಿವಶಂಕರ್), ಪು : 96, **ಬೆಲೆ** ರೂ 10, ಶುಭದ ಪ್ರಕಾಶನ, ಜರಗನಹಳ್ಳಿ, ಜೆ. ಪಿ. ನಗರ, ಬೆಂಗಳೂರು–560 070.

**ಅನಿವಾರ್ಯ** : ಜಿ. ಬಸವಂತಪ್ಪ, ಪು : 66, ಬೆಲೆ ರೂ. 4, ಉಮೇಶ ಪ್ರಕಾಶನ, ಹರಪನಹಳ್ಳಿ, ಬಳ್ಳಾರಿ ಜಿಲ್ಲೆ.

**ಅಧೋಲೋಕದ ಬೆಳಕು** : ಸ್ವಾಮಿನಾಥ, ಪು : 64, ಬೆಲೆ ರೂ. 9, ಶ್ರೀ ನಾಗ ಪ್ರಕಾಶನ, ಗೌನಿಪಲ್ಲಿ–563135, ಶ್ರೀನಿವಾಸಪುರ ತಾ||, ಕೋಲಾರ ಜಿಲ್ಲೆ.

**ನೆಲಕೊಡದ್ದ ಮುಗಿಲ ಜಿಗಿದದಿ** : ವೇದರಸ, ಪುಟ : 49, ಬೆಲೆ ರೂ. 8, ವೇದರಸ ಪ್ರಕಾಶನ, ಸ್ಟೇಟ್ ಬ್ಯಾಂಕ್ ಆಫ್ ಟ್ರಾವಂಕೂರ್, ತುಮಕೂರು–572101.

**ಅಂತರಾಳ** : ಇಂಪು. (ಪುಟ್ಟ. ಪ. ಕುಲಕರ್ಣಿ) 43, ಬೆಲೆ ರೂ. 5, ಪ್ರಜ್ಞಾ ಪ್ರಕಾಶನ, ರಾಣಿಬೆನ್ನೂರು, ಧಾರವಾಡ ಜಿಲ್ಲೆ.

**ಚಂದ್ರಲೇಖೆ** : ಬಾಲಕೃಷ್ಣಭಟ್ ಎಸ್. ವಿ., ಪುಟ : 24, ಬೆಲೆ ರೂ. 3, ಅಶ್ವಿನಿ ಪ್ರಕಾಶನ, ವಿಜಯನಗರ, ಬೆಂಗಳೂರು–560 040.

**ಹಕ್ಕಿ ಸಾಲು** : (ಮಕ್ಕಳ ಕವನ ಸಂಕಲನ) ಡಾ|| ಎಚ್.ಎಸ್. ವೆಂಕಟೇಶಮೂರ್ತಿ, ಪುಟ : 59, ಬೆಲೆ ರೂ. 8, ಕೃತಿ ಪ್ರಕಾಶನ, ತ್ಯಾಗರಾಜನಗರ, ಬೆಂಗಳೂರು.

# ಎರಡು ಕವನ ಸಂಕಲನಗಳು

**ಮ್ಯಾನಿಫೆಸ್ಟೋ : ಸರಜೂ ಕಾಟಕರ್, ಪ್ಯಾಂತರ್ ಪ್ರಕಾಶನ, ಹುಬ್ಬಳ್ಳಿ (1988)**

ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಜೀವನ ಕ್ರಮವನ್ನು ವಿಶ್ಲೇಷಿಸುವ, ಅಸಮಾನತೆಯನ್ನು ಪ್ರತಿಭಟಿಸುವ ಅಂಶಗಳಿಗೆ ಬಂಡಾಯ ಸಾಹಿತ್ಯ ಚಳುವಳಿ ನೀಡಿದ ಕೊಡುಗೆ ಹಿರಿದಾದದ್ದು. ಈ ಮಾರ್ಗದಲ್ಲಿ ಬರೆದ, ಬರೆಯುತ್ತಿರುವ ಲೇಖಕರ ಸಂಖ್ಯೆ ಅಪಾರ. ಅವರೆಲ್ಲರ ಬರಹಗಳೂ ಒಂದೇ ಮಟ್ಟದವು ಎನ್ನಲು ಬರುವುದಿಲ್ಲ. ಹಾಗಾಗಿ ಎಲ್ಲ ಸಂಗಡಗಳಲ್ಲಿರುವ ಹಾಗೆಯೇ ಇಲ್ಲಿ ಕೂಡಾ ಅರ್ಥಪೂರ್ಣವಾಗಿ ಬರೆಯುತ್ತಿರುವವರು ಕೆಲವರಾದರೂ ಇದ್ದಾರೆ ಎನ್ನುವುದನ್ನು ಅಲ್ಲಗಳೆಯಲಾಗದು. ಅಂಥವರಲ್ಲಿ ಶ್ರೀ ಸರಜೂ ಕಾಟಕರರೂ ಒಬ್ಬರು.

ಇದು ಸರಜೂ ಅವರ ಮೂರನೆಯ ಕವನ ಸಂಕಲನ. ಬಡತನ, ಶೋಷಣೆ, ಜಡ ಸಂಪ್ರದಾಯ, ಅನ್ಯಾಯಗಳ ವಿರುದ್ಧ ದನಿಯೆತ್ತುವ, ಮತ್ತು ಬದುಕಿನ ಕ್ರೂರ ವಾಸ್ತವಗಳನ್ನು ಒಳಹೊಕ್ಕು ಅರ್ಥೈಸುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ. ತಮ್ಮ ಈ ಹಿಂದಿನ ಎರಡೂ ಸಂಕಲನಗಳಲ್ಲಿ (ಹಸಿದ ನೆಲ, ಸೂರ್ಯ) ವ್ಯಕ್ತಪಡಿಸಿರುವ ವಿಚಾರಗಳನ್ನೇ ಗಟ್ಟಿದನಿಯಲ್ಲಿ ಇಲ್ಲಿ ದಾಖಲಿಸಲಾಗಿದೆ. ಒಣ ಆದರ್ಶ ಹಾಗು ನಗರ ನಾಗರೀಕತೆಯ ಪೊಳ್ಳುತನವನ್ನು 'ದಿಲ್ಲಿ : 35 ಸಾಲುಗಳು'ನಲ್ಲಿ ಇವರು ದಾಖಲಿಸಿರುವುದು ಹೀಗೆ :

> ದಲಿತ ಕವಿ ಬರೆದರೆ ಸನ್ಮಾನಿಸುತ್ತಾರೆ
> ಅದೇ ಅವ ಮೋರ್ಚಾನಡೆಸಿದರೆ ಗುಂಡುಹಾಕುತ್ತಾರೆ. (ಪು. 17)
>
> ದಿಲ್ಲಿ : ಬಗ್ಗಿದರೆ
> ಮೈಮೇಲೆ ಸವಾರಿ ಮಾಡುತ್ತದೆ
> ಹಿಡಿದಿಡಿದು ಹೊದ್ದರೆ
> ಬಗ್ಗಿ ಸಲಾಂ ಹಾಕುತ್ತದೆ. (ಪು. 18)

ಸಂಪ್ರದಾಯದಲ್ಲಿ ಮುಳುಗಿದ ಹೆಣ್ಣುಗಳು (ಕೈದಿ), ಗಾಂಧೀ ವಿಚಾರಗಳ ತಿಲಾಂಜಲಿ (ಗಾಂಧಿ ಶಿಕ್ಷ) ಬರದಿಂದ ತತ್ತರಿಸಿಸುವ ಜನರ ದಾರುಣ ಸ್ಥಿತಿ (ಬರಗಾಲ : ಐದು ಕವಿತೆಗಳು) ಉತ್ತಮವಾಗಿ ಮೂಡಿ ಬಂದಿರುವ ಕೆಲವು ಅಂಶಗಳು. ಆತ್ಮಕತೆ ಬರೆಯಲಾರೆ, ಲಾಲ್‌ಬಾಗ್, ದ್ವಂದ್ವ, ಅಶ್ವಮೇಧ ಗಮನಿಸಬೇಕಾದ ಕವಿತೆಗಳಾಗಿವೆ.

ಪ್ರಮೇಯ : ವೇಣುಗೋಪಾಲ ಸೊರಬ, ಸವಿತಾ ಪ್ರಕಾಶನ, ಕನಕಪುರ. (1986)

ವೈಯಕ್ತಿಕ ಸಂಬಂಧಗಳ ಹಿನ್ನೆಲೆಯಲ್ಲಿ ರಚನೆಗೊಂಡಿರುವ ಮುವತ್ತು ಕವಿತೆಗಳ ಸಂಕಲನವಿದು. ಎಲ್ಲ ಕವಿತೆಗಳೂ ಬೇರೆ ಬೇರೆಯಾಗಿರದೆ ಏಕ ಸೂತ್ರತೆಗೆ ಬದ್ಧವಾಗಿರುವುದರಿಂದಲೇ ಇವನ್ನು 'ಕವನಮಾಲೆ' ಎಂದು ಕರೆದಿದ್ದು. ಪಾಶ್ಚಾತ್ಯ ಸಾಹಿತ್ಯದಲ್ಲಿ ಕಂಡುಬರುವ 'ಡ್ರಮಾಟಿಕ್ ಮಾನೊಲಾಗ್'ಮಾದರಿಯನ್ನು ಕನ್ನಡದಲ್ಲಿ ಒಡಮೂಡಿಸುವ ಪ್ರಯತ್ನ ಮಾಡಲಾಗಿದೆ. ಕವಿಯೇ ಹೇಳಿರುವಂತೆ, "ಪ್ರಮೇಯದ ಹಿಂದಿನ ಪ್ರೇರಣೆ ಕೇವಲ ಪ್ರಯೋಗಶೀಲತೆಯಲ್ಲ. ಪ್ರತಿಯೊಬ್ಬನಲ್ಲೂ ಅಡಗಿರುವ, ಅದೇ ಸಮಯಕ್ಕೆ ತಾನು ಬೇರೆ ಎನಿಸುವ ಗಳಿಗೆಯಲ್ಲೇ, ತನ್ನ ಪ್ರತ್ಯೇಕತೆಯ ಸ್ಥಾಪನೆಯೇ ಮುಖ್ಯ ಎಂದು ಭಾವಿಸದಿರುವ, ಒಂದೇ ಅಯಸ್ಕಾಂತದ ಎರಡು ಧ್ರುವಗಳಂತೆ, ಪರಸ್ಪರ ಅನಿವಾರ್ಯವಾದ ವ್ಯಕ್ತಿತ್ವದ ಇನ್ನೊಂದು ಮಗ್ಗುಲ ಜತೆಯ ಸಂವಾದವನ್ನು, ತುಂಬಾ ಆಂತರಿಕ ದನಿಯಲ್ಲಿ ಹಿಡಿದಿಡಲು ಇಲ್ಲಿ ಪ್ರಯತ್ನಿಸಲಾಗಿದೆ. ವ್ಯಕ್ತಿ-ವ್ಯಕ್ತಿಗಳ ನಡುವಣ, ವ್ಯಕ್ತಿ-ವ್ಯಕ್ತಿತ್ವದ ನಡುವಣ ಸಂವಾದ ಈ ಎಲ್ಲ ಕವಿತೆಗಳ ಮೂಲ ಆಶಯ :

ನೀನು ಮಾತಾಡಿದಾಗ ನಾನು ಗಂಟಲು
ಸರಿಪಡಿಸಿಕೊಳ್ಳುವುದು ನಿನಗೂ ಗೊತ್ತೇ ಇದೆ (ಪು.1)
ಹೀಗೆ ಕಾಗದನ ಹಿಂಬಾಲಿಸಿ ನೀನೇ ಬರುತ್ತಿದ್ದೆ ಎಂಬ
ಅಂಶವನ್ನು ದಾಖಲಿಸಬೇಕೇನಪ್ಪಾ ? (ಪು. 49)

ಇಲ್ಲಿನ ಬಹುತೇಕ ಬಿಡಿ ಕವಿತೆಗಳು ಆಪ್ತಧಾಟಿಯಲ್ಲಿ ಮುಂದುವರಿಯುತ್ತವೆ. ತಾನು ಇನ್ನೊಬ್ಬನೊಡನೆ, ಇನ್ನೊಬ್ಬ ಈತನೊಡನೆ ಅಥವಾ ತಾನು ತನ್ನೊಳಗಿನವನೊಡನೆ ನಡೆಸುವ ಸಂವಾದ ಒಮ್ಮೊಮ್ಮೆ ಹಾಸ್ಯಪೂರಿತವಾಗಿ, ಮಗದೊಮ್ಮೆ ತಾರ್ಕಿಕವಾಗಿ ಮುಂದುವರಿಯುತ್ತದೆ. ಆದರೆ, ಓದುತ್ತಾ ಹೋದಂತೆ ಏನೋ ಕೊರತೆ ಇರುವಂತೆ ಭಾಸವಾಗುತ್ತಾ ಬರುತ್ತದೆ. ಏಕತಾನತೆ ಆವರಿಸಿಬಿಡುತ್ತದೆ. ಇದು ಘಟನಾತ್ಮಕವಾಗಿ ಮುಂದುವರಿಯದ ಕವಿತೆಗಳ ಮಿತಿಯೂ ಹೌದು. ಕೆಲವು ಕವಿತೆಗಳನ್ನು ಓದುವಾಗ ಕೆ. ಎಸ್. ನ ಅವರ 'ತೆರೆದ ಬಾಗಿಲು' ನೆನಪಿಗೆ ಬರುತ್ತದೆಯಾದರೂ, ಎರಡೂ ವಿಭಿನ್ನ ಆಶಯಗಳನ್ನು ಹೊಂದಿರುವುದರಿಂದ ನೇರಪ್ರಭಾವದಡಿ ತರಲಾಗುವುದಿಲ್ಲ.

ಇಲ್ಲಿ ಇರಬಹುದಾದ ಆರೆಕೊರೆಯ ನಡುವೆಯೂ ಸೊರಬರ ಭಾಷೆಯ ಬಳಕೆ, ನಿರೂಪಣೆಯ ನಾವೀನ್ಯ ನಮ್ಮ ಮೆಚ್ಚುಗೆಯನ್ನು ಪಡೆಯುತ್ತವೆ.

–ಕೆ. ಎಂ. ಮುನಿಕೃಷ್ಣಪ್ಪ

'ಗಾಂಧೀಜಿಯ ಆವಿರ್ಭಾವ, ಅದೊಂದು ಅಪೂರ್ವ ಸನ್ನಿವೇಶ. ಅದು ಹೊಸ ವಾತಾವರಣದ ವಿದ್ಯುತ್ ಸ್ಪರ್ಶ ಮಾಡಿದ ವಿಶಿಷ್ಟ ಶಕ್ತಿ. ಆ ಸ್ಪರ್ಶದಿಂದ ನಮ್ಮ ಕಾರ್ಯಕ್ಷೇತ್ರದ ಹರಹು ಮತ್ತಷ್ಟು ವಿಸ್ತಾರವಾಯಿತು. ಆ ದಿವ್ಯ ಚೇತನದ ಉಜ್ವಲ ಪ್ರಕಾಶದಿಂದ ನಮ್ಮ ಕಣ್ಣುಗಳನ್ನು ಕವಿದಿದ್ದ ಕತ್ತಲೆಯ ತೆರೆ ಸರಿಯಿತು. ಗಾಂಧೀಜಿ ಅಂತರಿಕ್ಷದಿಂದ ಇಳಿದು ಬಂದವರಲ್ಲ. ಭಾರತದ ಕೋಟಿ ಕೋಟಿ ಜನರ ನಡುವೆ ಉದಿಸಿ ಬಂದವರು.

–ಜವಹರಲಾಲ್ ನೆಹರು

ಜವಹರಲಾಲ್ ನೆಹರು, ಸರ್ದಾರ್ ಪಟೇಲ್, ಸುಭಾಷ್‌ಚಂದ್ರ ಭೋಸ್, ಸರೋಜಿನಿ ನಾಯ್ಡು, ಜಯಪ್ರಕಾಶ್ ನಾರಾಯಣ್ ಮೊದಲಾದ ಮಹಾನ್ ಸ್ವಾತಂತ್ರ್ಯ ಯೋಧರೊಂದಿಗೆ ಭಾರತದ ವೈಭವಪೂರ್ಣ ಸ್ವಾತಂತ್ರ್ಯ ಧ್ಯೇಯಕ್ಕಾಗಿ ರಾಷ್ಟ್ರದ ಸಹಸ್ರ, ಸಹಸ್ರ ಸಂಖ್ಯೆಯ ಜನತೆಗೆ ಸ್ಫೂರ್ತಿ ನೀಡಿ, ಹುರಿದುಂಬಿಸಿದ ಅದ್ಭುತ ದಾರ್ಶನಿಕ ಚೇತನ, ಮಹಾತ್ಮಾಗಾಂಧೀಜಿ.

ತಮ್ಮ ಅಪೂರ್ವ ತ್ಯಾಗ ಮತ್ತು ಬಲಿದಾನದಿಂದ ರಾಷ್ಟ್ರಕ್ಕೆ ಸ್ವಾತಂತ್ರ್ಯವನ್ನು ತಂದು ಕೊಟ್ಟ ಹುತಾತ್ಮರಿಗೆ ಸ್ವಾತಂತ್ರ್ಯ ದಿನದಂದು ಶ್ರದ್ಧಾಂಜಲಿಯನ್ನರ್ಪಿಸುವುದು ನಮ್ಮ ಕರ್ತವ್ಯ. ಇದು ಒಂದು ಸಂಭ್ರಮದ ದಿನ, ನಿಜ. ಆದರೆ ಅವರೊಂದಿಗೇ ಸ್ವಾತಂತ್ರ್ಯ ಪದದ ಪೂರ್ಣವಾದ ಅರ್ಥವನ್ನು ಅರಿತುಕೊಳ್ಳುವ ದಿನವೂ ಹೌದು, ಎಂಬುದನ್ನು ನಾವು ಮರೆಯಬಾರದು.

ಕಳೆದ ಐದು ವರ್ಷಗಳಲ್ಲಿ ಕರ್ನಾಟಕ ರಾಜ್ಯ ವಿವಿಧ ಅಭಿವೃದ್ಧಿ ಕ್ಷೇತ್ರಗಳಲ್ಲಿ ಹೆಮ್ಮೆ ಪಡುವಂತಹ ಸಾಧನೆ ಮಾಡಿದೆ. ಒಟ್ಟು ಜನತೆಯ ಕ್ಷೇಮಾಭ್ಯುದಯಕ್ಕಾಗಿ ಹಲವಾರು ಪ್ರಗತಿಪರ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಿರುವ ಕರ್ನಾಟಕ, ಮುನ್ನಡೆಯ ಹಾದಿಯಲ್ಲಿ ಮುಂಚೋಣಿಯಲ್ಲಿರುವ ರಾಜ್ಯ.

**ಕುಟುಂಬ ಯೋಜನೆ :** ಕುಟುಂಬ ಕಲ್ಯಾಣ ಕಾರ್ಯಕ್ರಮಗಳ ಅನುಷ್ಠಾನದಲ್ಲಿ 1986–87 ರಲ್ಲಿ ಶೇ. 91.3 ರಷ್ಟು ಪ್ರಗತಿ ಸಾಧಿಸಿರುವ ಕರ್ನಾಟಕ ಚಿಕ್ಕ ಕುಟುಂಬದ ಆದರ್ಶಕ್ಕೆ ಮಾದರಿಯಾಗಿದೆ.

**ಕುಡಿಯುವ ನೀರು :** ಕಳೆದ ಐದು ವರ್ಷಗಳಲ್ಲಿ 50 ಸಾವಿರ ಕೊಳವೆ ಬಾವಿಗಳನ್ನು ಕೊರೆದಿರುವ ಕರ್ನಾಟಕ ದಾಖಲೆಯ ನಿರ್ಮಿಸಿದೆ.

**ಪಂಪುಸೆಟ್ಟುಗಳಿಗೆ ವಿದ್ಯುತ್ ಪೂರೈಕೆ :** ಪಂಪುಸೆಟ್ಟುಗಳಿಗೆ ವಿದ್ಯುತ್ ಪೂರೈಸುವ ವಿಚಾರದಲ್ಲಿ ಗುರಿ ಮೀರಿದ ಸಾಧನೆಯಾಗಿದೆ.

**ಶುಷ್ಕ ಭೂಮಿ ಅಭಿವೃದ್ಧಿ :** ಶುಷ್ಕ ಭೂಮಿ ಅಭಿವೃದ್ಧಿಗಾಗಿ ವೈಜ್ಞಾನಿಕ ಯೋಜನೆ ಕೈಗೊಂಡಿರುವ ಕರ್ನಾಟಕ, ಇರುವ ಸಂಪನ್ಮೂಲಗಳನ್ನು ಸಮರ್ಥವಾಗಿ ಬಳಸಿ, ಕೃಷಿ ಕ್ಷೇತ್ರದಲ್ಲಿ ಅಧಿಕ ಉತ್ಪಾದನೆಗೆ ಅವಕಾಶ ಕಲ್ಪಿಸಿದೆ. ಇಪ್ಪತ್ತು ಅಂಶಗಳ ಕಾರ್ಯಕ್ರಮದ ಅನುಷ್ಠಾನದಲ್ಲಿ ಕರ್ನಾಟಕ ಒಳ್ಳೆಯ ಸಾಧನೆ ತೋರಿದೆ.

**ಜನತೆಯ ಕೈಗೇ ಅಧಿಕಾರ :** ಗಾಂಧೀಜಿಯ 'ಗ್ರಾಮರಾಜ್ಯ'ದ ಕಲ್ಪನೆಯನ್ನು ಕೃತಿಗಿಳಿಸಿ ಪಂಚಾಯಿತಿ ರಾಜ್ಯ ವ್ಯವಸ್ಥೆಯನ್ನು ಜಾರಿಗೆ ತಂದಿರುವ ಕರ್ನಾಟಕ, ಅಧಿಕಾರ ವಿಕೇಂದ್ರೀಕರಣದ ಹಾದಿಯಲ್ಲಿ ದಿಟ್ಟ ಹೆಜ್ಜೆಯನ್ನಿಟ್ಟಿರುವ ರಾಜ್ಯ. ಈಗ ರಾಜ್ಯದಲ್ಲಿ ಜನತೆಯ ಕೈಗೇ ಅಧಿಕಾರ. ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸುವವರೂ ಅವರೇ, ಅನುಷ್ಠಾನಗೊಳಿಸುವ ಹೊಣೆಯೂ ಅವರದೇ.

**ಚುನಾವಣಾ ಸುಧಾರಣೆ :** ಹಲವಾರು ಚುನಾವಣಾ ಸುಧಾರಣೆಗಳನ್ನು ಜಾರಿಗೆ ತಂದಿರುವ ಪ್ರಜಾಪ್ರಭುತ್ವ ತತ್ವವನ್ನು ಅನ್ವರ್ಥಗೊಳಿಸಿದೆ.

**ಸ್ವಚ್ಛ ಆಡಳಿತ :** ಅಧಿಕಾರದ ದುರುಪಯೋಗ ಮತ್ತು ಭ್ರಷ್ಟಾಚಾರವನ್ನು ತಡೆಗಟ್ಟಿ, ಆಡಳಿತ ಕ್ಷೇತ್ರದಲ್ಲಿ ಸ್ವಚ್ಛತೆ ಮತ್ತು ದಕ್ಷತೆಯನ್ನು ಮೂಡಿಸುವ ಸಲುವಾಗಿ ಕರ್ನಾಟಕ ಸರ್ಕಾರ ಕೈಗೊಂಡಿರುವ ಒಂದು ಆದರ್ಶ ನಿರ್ಧಾರ, ಲೋಕಾಯುಕ್ತರ ರಚನೆ.

ಬಡತನ, ಅನಕ್ಷರತೆ, ಅಜ್ಞಾನ ಮತ್ತು ಶೋಷಣೆಗಳ ನಿರ್ಮೂಲನಕ್ಕೆ ನಿರಂತರ ಪ್ರಯತ್ನ ನಡೆಸುತ್ತಿರುವ ಕರ್ನಾಟಕ ಸರ್ಕಾರ, ಜನತೆಯ ವಿಶ್ವಾಸದೊಂದಿಗೇ ಸಾಮಾಜಿಕ ಸಮಾನತೆಯನ್ನು ಸಾಧಿಸುವ ದೃಢ ವಿಶ್ವಾಸವನ್ನು ಹೊಂದಿದೆ.

"ಕರ್ನಾಟಕ ವಾರ್ತೆ"

ಪ್ರಿಯರೆ,

ಏಪ್ರಿಲ್ ಮಧ್ಯದಲ್ಲಿ ಪ್ರಕಟವಾದ ಜನವರಿ-88ರ 'ಅನ್ವೇಷಣೆ' ನಂತರದ ಮೂರು ತಿಂಗಳ ಬಿಡುವಿನ ನಂತರ ಈಗ ಪ್ರಕಟವಾಗುತ್ತಿದೆ. ಈ ನಡುವೆ ಫೆಬ್ರವರಿಯಿಂದ ಜೂನ್‌ವರೆಗೆ ಸಂಚಿಕೆಗಳನ್ನು ಮುದ್ರಿಸಲಾಗಲಿಲ್ಲ-ಅದಕ್ಕಾಗಿ ವಿಷಾಧಿಸುತ್ತೇವೆ. ಇನ್ನು ಮುಂದೆ ನಿಯತಕಾಲಿಕವಾಗಿ ಹೊರತರಲು ಪ್ರಯತ್ನಿಸುತ್ತೇವೆ. ಚಂದಾದಾರರಿಗೆ ಯಾವುದೇ ತೊಂದರೆಯಾಗದಂತೆ ಸಂಚಿಕೆಗಳನ್ನು ಕಳುಹಿಸಿಕೊಡಲಾಗುವುದು.

* * * *

ಸೆಪ್ಟಂಬರ್ 11ನೇ ಭಾನುವಾರ "ಸಾಹಿತ್ಯ-ಚಿತ್ರಕಲೆ-ರಂಗಭೂಮಿ : ಸಹ ಸಂಬಂಧಗಳ ಸ್ವರೂಪ ಮತ್ತು ಅಭಿವ್ಯಕ್ತಿ" ಎಂಬ ವಿಷಯದಡಿ ನಾಲ್ಕು ಪ್ರಬಂಧಗಳ ಮಂಡನೆಯ ವಿಚಾರ ಸಂಕಿರಣವನ್ನು 'ಅನ್ವೇಷಣೆ-ಸಂಘರ್ಷ ವಿಚಾರ ವೇದಿಕೆ' ಏರ್ಪಡಿಸಿದೆ. ಇದನ್ನು ರಾಜ್ಯ ಸಾಹಿತ್ಯ ಅಕಾಡೆಮಿ, ಲಲಿತಕಲಾ ಅಕಾಡೆಮಿಗಳ ಸಂಯುಕ್ತ ಆಶ್ರಯದಲ್ಲಿ ಹಮ್ಮಿಕೊಳ್ಳಲಾಗಿದೆ. (ಸ್ಥಳ : ಬೆಂಗಳೂರು ವಿಶ್ವವಿದ್ಯಾನಿಲಯದ ಸೆಂಟ್ರಲ್ ಕಾಲೇಜ್ ಸೆನೆಟ್ ಹಾಲ್) ಈ ಮುನ್ನ ಈ ವಿಚಾರ ವೇದಿಕೆ 6 ತಿಂಗಳು ನಿರಂತರ ಕವಿಗೋಷ್ಠಿ-ಚರ್ಚೆಗಳನ್ನು ಕೆನ್ ಕಲಾ ಶಾಲೆಯಲ್ಲಿ ಹಮ್ಮಿಕೊಂಡಿತ್ತು.-ಸಂಪಾದಕ

---

ಈ ಸಂಚಿಕೆಯ ಲೇಖಕರು/ವಿಳಾಸ

○ ಯ. ಕೃಷ್ಣಶರ್ಮ, 3, ಶ್ರೀ ಸುಬ್ರಹ್ಮಣ್ಯಸ್ವಾಮಿ ಮಂದಿರಂ, ವಿಶ್ವೇಶ್ವರಪುರಂ, ಬೆಂಗಳೂರು-560004.

○ ಕೆ. ವಿ. ಸುಬ್ರಹ್ಮಣ್ಯ, 40/3, 1ನೇ ಮೇನ್, 10ನೇ ಕ್ರಾಸ್, ಬಾಪೂಜಿನಗರ ಬೆಂಗಳೂರು-26, ○ ಡಾ|| ಪ್ರೋಲಂಕಿ ರಾಮಮೂರ್ತಿ, ಮುಖ್ಯಸ್ಥರು, ಇಂಗ್ಲೀಷ್ ವಿಭಾಗ, ಮಾನಸ ಗಂಗೋತ್ರಿ, ಮೈಸೂರು-6. ○ ವೇಣುಗೋಪಾಲ ಸೊರಬ, ಇಂಗ್ಲೀಷ್ ಉಪನ್ಯಾಸಕರು, ರೂರಲ್ ಕಾಲೇಜ್, ಕನಕಪುರ, ಬೆಂಗಳೂರು ಜಿಲ್ಲೆ. ○ ಮಲ್ಲೇಪುರಂ ಜಿ. ವೆಂಕಟೇಶ್, ಕನ್ನಡ ಉಪಧ್ಯಾಯರು, ನಗರಸಭಾ ಬಾಲಕರ ಪ್ರೌಢಶಾಲೆ, ಕೋದಂಡರಾಮಪುರ, ಬೆಂಗಳೂರು-3. ○ ಸ. ರಘುನಾಥ, ಗೌನಿಪಲ್ಲಿ, ಕೋಲಾರ ಜಿಲ್ಲೆ. ○ ಪ್ರೊ||ಜಿ.ಎಸ್. ಸಿದ್ದಲಿಂಗಯ್ಯ, ನಿರ್ದೇಶಕರು, ಕರ್ನಾಟಕ ಕಾಲೇಜಿಯೇಟ್ ಎಜ್ಯುಕೇಷನ್, ಬೆಂ-1. ○ ಎಲ್. ಎನ್. ಮುಕುಂದರಾಜ್, ಕನ್ನಡ ಉಪನ್ಯಾಸಕ, ಸರ್ಕಾರಿ ಕಿರಿಯ ಕಾಲೇಜು, ಬೆಳ್ಳೂರು-ಮಂಡ್ಯ (ಜಿಲ್ಲೆ). ○ ನಜೀರ್ ಚಂದಾವರ, ಶಿರಸಿ(ಉ.ಕ). ○ ಸಂಧ್ಯಾ ಲಕ್ಷ್ಮೀಕಾಂತ್, ಗೌನಿಪಲ್ಲಿ, ಕೋಲಾರ ಜಿಲ್ಲೆ. ○ ವಿದ್ಯಾ ಭರತನಹಳ್ಳಿ D/o ನಾ. ಸು. ಭರತನಹಳ್ಳಿ, 'ಮುನ್ನಡೆ' ದೈನಿಕ, ಸಿರಸಿ (ಉ. ಕ.). ○ ಡಾ|| ಮನಜ (ಜವರಯ್ಯ), ಭಾರತೀಯ ಭಾಷಾ ಸಂಸ್ಥಾನ, ಮಾನಸಗಂಗೋತ್ರಿ, ಮೈಸೂರು-570 006. ○ ಕೆ. ಎಂ. ಮುನಿಕೃಷ್ಣಪ್ಪ, 17/1, 'ಶ್ರೀರಂಗನಿಲಯ' ಚಿಕ್ಕಣ್ಣ ಗಾರ್ಡನ್, ಚಾಮರಾಜಪೇಟೆ, ಬೆಂಗಳೂರು-560 018.

## ಲಂಕೇಶ್ ಕೆಲವು ತುಣುಕುಗಳು

೧

ತುಂಟಾಟದಲ್ಲಿ
ಹುಸಿ
ನಗೆ ಬೀರಿ
ಹೆಂಗೆಳೆಯರ
ಮನ
ಗೆಲ್ಲುವ ಚೋರ.

೨

ಪಾಂಚಾಲಿಯಲ್ಲಿ
ಜನ್ಮ ಕೊಟ್ಟ
'ನೀಲು' ಗೆ–
ಮಂಡ್ಯ
ಸಕ್ಕರೆ ತಿನ್ನಿಸಿ
ಲಂ. ಪ. ದಲ್ಲೂ
ಮುತ್ತು
ನಕ್ಷತ್ರ
ಪೋಣಿಸಿದ
ಪಾಳೇಗಾರ !

೩

ಮಣ್ಣ ವಾಸನೆ
ಹಿಡಿದು
ಹೂವು ಹಣ್ಣು
ಕೊಡುವ
ಗಿಡ ನೆಟ್ಟು
ಬೆಚ್ಚಗೆ
ಕೌದಿಯಲ್ಲಿ
ಕನಸು ಕಾಣುವ
ಹದಿ–
ಹರೆಯದ ಯೌವನಿಗ.

೪

ಕೀಟ್ಸ್
ಮಿಲ್ಟನ್, ಈಲಿಯಟ್
ಬೋಧಿಲೇರ್ ರನ್ನು
ಬೆತ್ತಲೆಗೊಳಿಸಿ ;
ಗಾಂಧೀ, ಲೋಹಿಯಾ
ಜೊತೆ ಹೆಗಲೇರಿ
ಗುಂಡಲ್ಲಿ
ಮೈ–
ಮರೆಯುದ
ಜಾಣೆಯರ ಜಾಣ.

೫

ಪ್ರಗತಿ ರಂಗದ
ಹಾದಿಯಲ್ಲಿ
ಕಲ್ಲು–ಮುಳ್ಳು
ತುಳಿಯುತ್ತ
"ಕೆಂಗಲ್
ಸೌಧ"ದ
ಕನಸಲ್ಲಿ ವಿಹರಿಸುತ್ತ
ಡೆಮೋಕ್ಲೆಸ್‌ನ
ಕತ್ತಿ
ಹಿಡಿಯಲು ಹೊರಟ
ಹುಚ್ಚ !

–ಆರ್.ಜಿ. ಹಳ್ಳಿ ನಾಗರಾಜ್.

ANVESHANE MAG (5) PRB-DECL 127/85-86

# ಅನ್ವೇಷಣೆ–ಸಂಘರ್ಷ ವಿಚಾರ ವೇದಿಕೆ ಬೆಂಗಳೂರು

ದಿನಾಂಕ 11-9-1988 ಭಾನುವಾರ

## “ಸಾಹಿತ್ಯ–ಚಿತ್ರಕಲೆ–ರಂಗಭೂಮಿ
## ಸಹ ಸಂಬಂಧಗಳ ಸ್ವರೂಪ ಮತ್ತು ಅಭಿವ್ಯಕ್ತಿ”
## ವಿಚಾರ ಸಂಕಿರಣ–ಚರ್ಚೆ.

ಸ್ಥಳ : ಬೆಂಗಳೂರು ವಿಶ್ವವಿದ್ಯಾಲಯದ ಸೆಂಟ್ರಲ್ ಕಾಲೇಜ್, ಸೆನೆಟ್ ಹಾಲ್

ಉದ್ಘಾಟನೆ : ಡಾ॥ ಜಿ. ಎಸ್. ಶಿವರುದ್ರಪ್ಪ

ಅಧ್ಯಕ್ಷತೆ : ಆರ್. ಎಂ. ಹಡಪದ್

ವಿಚಾರ ಸಂಕಿರಣದಲ್ಲಿ ಡಾ॥ಬಿ.ಸಿ. ರಾಮಚಂದ್ರಶರ್ಮ, ಡಾ॥ ಚಂದ್ರಶೇಖರ ಕಂಬಾರ, ಮಲ್ಲೇಪುರಂ ಜಿ. ವೆಂಕಟೇಶ್, ಡಾ॥ ಡಿ. ಆರ್. ನಾಗರಾಜ್, ಚಿ. ಸು. ಕೃಷ್ಣಸೆಟ್ಟಿ, ಸಿ. ಚಂದ್ರಶೇಖರ್, ಅ. ಲ. ನರಸಿಂಹನ್, ಡಾ॥ ಕೆ. ವಿ. ನಾರಾಯಣ, ಡಾ॥ ಕೆ. ಮರುಳಸಿದ್ದಪ್ಪ, ಜಿ. ಕೆ. ಗೋವಿಂದರಾವ್, ಶ್ರೀಮತಿ ವಿಜಯ, ಕ. ವೆಂ. ರಾಜಗೋಪಾಲ ಅವರುಗಳು ಭಾಗವಹಿಸುತ್ತಾರೆ.

ಸಹಾಯ : ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು.

---

## ಮುಂದಿನ ಅನ್ವೇಷಣೆಯಲ್ಲಿ

ಡಾ॥ಕೆ. ಮರುಳಸಿದ್ದಪ್ಪ, ಡಾ॥ಪೋಲಂಕಿ ರಾಮಮೂರ್ತಿ, ಕೆ.ಸಿ. ಪ್ರದೀಪಕುಮಾರ್, ಈ. ಚಂದ್ರತಾಳೀಕಟ್ಟೆ, ಸಿದ್ಧಲಿಂಗಯ್ಯ, ರಾಜಪ್ಪ ದಳವಾಯಿ, ಕೆ.ಎನ್. ಗಾಯತ್ರಿ, ವೇದರಸ, ಪುಷ್ಪ ನಾಗರಾಜ್, ಶೈಲೇಂದ್ರ ಬಂದಗದ್ದೆ, ರಾಧಾಕೃಷ್ಣ, ಡಾ॥ ಕೆ. ವಿ. ನಾರಾಯಣ ಮತ್ತು ಇತರರು.

---

ಸಂಪಾದಕ/ಮುದ್ರಕ : ಆರ್. ಜಿ. ಹಳ್ಳಿ ನಾಗರಾಜ್, ಪ್ರಕಾಶಕರು : ಅರುಣ ಯುವ ಲೇಖಕರ ಬ
ಬೆಂಗಳೂರು-79, ಚೇತನ ಪ್ರಿಂಟರ್ಸ್, ಎಲ್. ಎನ್. ಪುರಂ, ಬೆಂಗಳೂರು-21.